೧

## ಕೇವಲ ಔಪಚಾರಿಕ ಕಸರತ್ತು

ಏಳನೇ ಪಂಚವಾರ್ಷಿಕ ಯೋಜನೆ (1985-90)ಯನ್ನು 1985 ರ ನವೆಂಬರ್ 8 ಮತ್ತು 9ರಂದು ನಡೆದ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಅಧಿವೇಶನದಲ್ಲಿ ಕೇವಲ ಔಪಚಾರಿಕವಾಗಿ ಅಂಗೀಕರಿಸಲಾಯಿತು. ಪ. ಬಂಗಾಳ ಮತ್ತು ತ್ರಿಪುರ ರಾಜ್ಯಗಳ ಎಡರಂಗ ಸರಕಾರಗಳ ಮುಖ್ಯ ಮಂತ್ರಿಗಳು ಯೋಜನೆಯ ಗುರಿ ಧೋರಣೆಗಳ ಹಾಗೂ ಅವುಗಳನ್ನು ಕಾರ್ಯಗತಗೊಳಿಸುವ ವಿಧಾನಗಳ ಕುರಿತು ತಮ್ಮ ತೀವ್ರ ಭಿನ್ನಾಭಿಪ್ರಾಯಗಳನ್ನು ವ್ಯಕ್ತಗೊಳಿಸಿದರು. ಕಾಂಗ್ರೆಸ್ಸೇತರ ರಾಜ್ಯ ಸರ್ಕಾರಗಳ ಮುಖ್ಯಮಂತ್ರಿಗಳೂ, ವಿರೋಧ ಪಕ್ಷಗಳ ಧುರೀಣರೂ, ಅರ್ಥಶಾಸ್ತ್ರಜ್ಞರೂ, ಸಮಾಜ ವಿಜ್ಞಾನಿಗಳೂ, ಸಾಮೂಹಿಕ ಸಂಘಟನೆಗಳ ವಕ್ತಾರರೂ, ಯೋಜನೆಯ ಗುಣದೋಷಗಳ ಕುರಿತು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಸಿಪಿಐ (ಎಂ), ಸಿಪಿಐ, ಆರ್. ಎಸ್. ಪಿ. ಫಾರ್ವರ್ಡ್ ಬ್ಲಾಕ್‌ನ ಎಡ ಪಕ್ಷಗಳ ಸಂಸತ್ ಸದಸ್ಯರು ಯೋಜನೆಯನ್ನು ಸಂಸತ್ತಿನಲ್ಲಿಟ್ಟು ಚರ್ಚಿಸದೆ ನೇರವಾಗಿ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯಲ್ಲಿಯೇ ಅಂಗೀಕರಿಸಿರುವುದನ್ನು ಕಟುವಾಗಿ ಟೀಕಿಸಿದ್ದಾರೆ. ಕಾಂಗ್ರೆಸ್ ಸರ್ಕಾರದ ಆರನೇ ಯೋಜನೆಯನ್ನೂ ಸಂಸತ್ತಿನಲ್ಲಿ ಚರ್ಚಿಸದೆ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯಲ್ಲಿ ಅಂಗೀಕರಿಸಲಾಗಿದ್ದು ಕೆಟ್ಟ ಪರಂಪರೆಗೆ ನಾಂದಯಾಗಿತ್ತು.

ಈ ಹಿಂದೆ ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಗಳನ್ನು ರಾಜ್ಯ ಸರಕಾರಗಳಿಗೆ, ಅಧ್ಯಯನ ಸಂಸ್ಥೆಗಳಿಗೆ, ವಿಶ್ವವಿದ್ಯಾನಿಲಯಗಳಿಗೆ, ರಾಜಕೀಯ ಪಕ್ಷಗಳಿಗೆ, ಸಾಮೂಹಿಕ ಸಂಘಟನೆಗಳಿಗೆ ಮರು ಅಭಿಪ್ರಾಯಗಳಿಗಾಗಿ ಕಳಿ

ಸಲಾಗುತ್ತಿತ್ತು. ಕರಡು ಯೋಜನೆಯ ಕುರಿತು ರಾಷ್ಟ್ರವ್ಯಾಪಿ ಚರ್ಚೆಗಳು ನಡೆಯುತ್ತಿದ್ದವು. ರಾಷ್ಟ್ರೀಯ ವೃತ್ತ ಪತ್ರಿಕೆಗಳಲ್ಲಿ, ನಿಯತಕಾಲಿಕಗಳಲ್ಲಿ ವಿಶೇಷ ಲೇಖನಗಳು ಪ್ರಕಟವಾಗುತ್ತಿದ್ದವು. ಸಂಸತ್‌ನಲ್ಲಿಯೂ ವ್ಯಾಪಕ ಚರ್ಚೆಗಳು ನಡೆಯುತ್ತಿದ್ದವು. ಅಂತಿಮವಾಗಿ ಯೋಜನೆಯು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಅಂಗೀಕರಿಸಲ್ಪಡುತ್ತಿತ್ತು. ಜನತಾ ಸರಕಾರದ ಅವಧಿಯಲ್ಲಿ (1977-79) ಯೋಜನೆಯ ಕರಡು ಪ್ರತಿಗಳನ್ನು ಸಾರ್ವಜನಿಕರಿಗೆ ಮುಕ್ತ ಮಾರುಕಟ್ಟೆಯಲ್ಲಿ ಒದಗಿಸಲಾಗಿತ್ತು. ನಂತರ ಅಧಿಕಾರಕ್ಕೆಬಂದ ಕಾಂಗ್ರೆಸ್ ಸರಕಾರ ಆರನೇ ಯೋಜನೆಯನ್ನು ಕೈಬಿಟ್ಟುದೇ ಅಲ್ಲದೆ ಯೋಜನೆಯ ಕುರಿತು ಸಾರ್ವಜನಿಕ ಚರ್ಚೆಯ ಸತ್ಸಂಪ್ರದಾಯಕ್ಕೂ ತಿಲಾಂಜಲಿ ಕೊಟ್ಟಿತು.

ಈಗ ಏಳನೆಯ ಯೋಜನೆಯ ಕರಡು ಪ್ರತಿ, ಕೇಂದ್ರ ಸಂಪುಟದ ಅಂಗೀಕಾರದ ನಂತರವೂ, ಸರಕಾರದ "ರಹಸ್ಯ ದಸ್ತಾವೇಜು" ಆಗಿ ಉಳಿದಿದೆ! ಅದು ಎಷ್ಟು ರಹಸ್ಯವಾಗಿದೆ ಎಂದರೆ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಅದನ್ನು ಚರ್ಚಿಸಿ ಅಂಗೀಕರಿಸಬೇಕಾದ ರಾಜ್ಯಸರ್ಕಾರಗಳಿಗೂ ಅದರ ಪ್ರತಿಗಳನ್ನು ಮುಂಚಿತವಾಗಿ ಕೊಡದೆ, ಅಧಿವೇಶನಕ್ಕೆ ಒಂದೆರಡು ವಾರಗಳ ಮುಂಚಿತವಾಗಿ ಮಾತ್ರ ಒದಗಿಸಲಾಗಿತ್ತು. ಇನ್ನಾದರೂ ಅದರ ಪ್ರತಿಗಳು ಸಾರ್ವಜನಿಕರಿಗೆ, ಪತ್ರಿಕೆಗಳಿಗೆ, ರಾಜಕೀಯ ಪಕ್ಷಗಳಿಗೆ, ಸಾಮೂಹಿಕ ಸಂಘಟನೆಗಳಿಗೆ, ಅರ್ಥಶಾಸ್ತ್ರಜ್ಞರಿಗೆ ಕೊಂಡುಕೊಳ್ಳಲು ಮುಕ್ತ ಮಾರುಕಟ್ಟೆಯಲ್ಲಿ ಸಿಗುವುದಿಲ್ಲ. ಬದಲು ಯೋಜನೆಯ ಕುರಿತಾದ ಸಂಕ್ಷಿಪ್ತ ಟಿಪ್ಪಣಿಯ ಪ್ರತಿಗಳು ಮಾತ್ರ ಕೆಲವು ಕಡೆಗಳಲ್ಲಿ ಸಿಗುತ್ತವೆ. ಅದರ ಆಧಾರದಲ್ಲಿ ಅಲ್ಪ ಸ್ವಲ್ಪ ಚರ್ಚೆಗಳು ನಡೆಯುತ್ತಿವೆ.

ಸ್ವಾತಂತ್ರ್ಯ ನಂತರದ ಭಾರತದಲ್ಲಿ ಮೂರು ದಶಕಗಳ ಅವಧಿಯ ಆರು ಪಂಚವಾರ್ಷಿಕ ಯೋಜನೆಗಳ ನಂತರವೂ, 50 ಕೋಟಿ ಅನಕ್ಷರಸ್ಥರನ್ನೂ, 35 ಕೋಟಿ ಬಡತನರೇಖೆಯ ಕೆಳಗಿನವರನ್ನೂ, 2.5 ಕೋಟಿ ನಿರದ್ಯೋಗಸ್ಥರನ್ನೂ ಉಳಿಸಿಕೊಂಡು, 21ನೇ ಶತಮಾನಕ್ಕೆ ನೆಗೆಯುವ ಕನಸು ಕಾಣುವ ಆಧುನಿಕ ಯುವ ಪ್ರಧಾನಿ ರಾಜೀವ್ ಗಾಂಧಿಯ ಕಾಂಗ್ರೆಸ್ ಸರಕಾರದಲ್ಲಿ

ಆರ್ಥಿಕ ಯೋಜನೆಗೆ- ಕಂಪ್ಯೂಟರ್ ಮತ್ತು ಟೆಲಿವಿಶನ್‌ಗಳಿಗಿಂತಲೂ-ಗೌಣ ಸ್ಥಾನ ಎಂದು ಸ್ಪಷ್ಟವಾಗುತ್ತದೆ. ಪರಿಣಾಮವಾಗಿ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿಗಳ ಸ್ಥಾನವೂ ಗೌಣವಾಗುತ್ತದೆ. ಹೊಸ ಸರಕಾರ ಉದ್ದೇಶಪೂರ್ವಕವಾಗಿಯೇ ಯೋಜನೆಯ ಕುರಿತು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಒಳಗೂ ಹೊರಗೂ ವ್ಯಾಪಕ ಚರ್ಚೆ-ವಿಚಾರ ವಿನಿಮಯಗಳಿಗೆ ಆಸ್ಪದ ಕೊಡುವುದಿಲ್ಲ. ಯೋಜನೆಯು ಕೇವಲ ಔಪಚಾರಿಕ ಕಸರತ್ತಾಗುತ್ತಿದೆ, ಹೆಚ್ಚಿನ ಆರ್ಥಿಕ ವಿಷಯಗಳು ಕೈಗಾರಿಕೋದ್ಯಮಿಗಳ ಹಾಗೂ ವಿಶ್ವಬ್ಯಾಂಕು, ಅಂತರ್ರಾಷ್ಟ್ರೀಯ ಸಂಸ್ಥೆಗಳ ತಜ್ಞರ ಮತ್ತು ಅಧಿಕಾರಶಾಹಿ ವರ್ಗದ ಗುಪ್ತಸಭೆಗಳಲ್ಲಿ ನಿರ್ಣಯಿಸಲ್ಪಡುತ್ತವೆ ! ಯೋಜನಾ ಆಯೋಗ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಮತ್ತು ಸಂಸತ್ತು ಈ ಪೂರ್ವ-ನಿಯೋಜಿತ ನಿರ್ಣಯಗಳಿಗೆ ಅಚ್ಚೊತ್ತುವ ಸಂಸ್ಥೆಗಳಾಗುತ್ತಿವೆ!

## ಆಯೋಗ ಮತ್ತು ಮಂಡಳಿಯ ಅವನತಿ

ರಾಷ್ಟ್ರೀಯ ಯೋಜನಾ ಆಯೋಗವು ಮೊದಲಿನಿಂದಲೂ ಕೇಂದ್ರ ಸರಕಾರದ ಹಣಕಾಸು ಶಾಖೆಗೆ ಸೇರಿದ ಒಂದು ಇಲಾಖೆಯಾಗಿದೆ. ಅದಕ್ಕೆ ಸಂವಿಧಾನದ ಅಥವಾ ಶಾಸನದ ಆಧಾರವಿಲ್ಲ. ಅದರ ಕಾರ್ಯವ್ಯಾಪ್ತಿ, ಸದಸ್ಯತ್ವ, ಖರ್ಚು ವೆಚ್ಚ, ಕೇಂದ್ರ ಸರಕಾರವೇ ನಿರ್ಧರಿಸುವುದು. ಕೇಂದ್ರ ಸಂಪುಟದ ಒಬ್ಬ ಮಂತ್ರಿಯೇ ಅದರ ಕಾರ್ಯಕಾರಿ ಅಧ್ಯಕ್ಷನಾಗಿರುತ್ತಾನೆ. ರಾಜ್ಯ ಸರಕಾರಗಳ ಪ್ರಾತಿನಿಧ್ಯ ಯೋಜನಾ ಆಯೋಗದಲ್ಲಿರುವುದಿಲ್ಲ. ಆದರೂ ಕೇಂದ್ರವು ರಾಜ್ಯಗಳಿಗೆ ನೀಡುವ ಹಣಕಾಸಿನ ಶೇ70 ರಷ್ಟು ಯೋಜನಾ ಆಯೋಗದ-ಅರ್ಥಾತ್ ಕೇಂದ್ರ ಹಣಕಾಸು ಶಾಖೆಯ ಮರ್ಜಿಗನುಗುಣವಾಗಿರುವುದು. ಕೇವಲ ಶೇ. 30 ರಷ್ಟು ಸಂವಿಧಾನದ ಅಂಗ ಸಂಸ್ಥೆಯಾದ ಹಣಕಾಸು ಆಯೋಗದ ಸಲಹೆಗಳನ್ನಾಧರಿಸಿರುವುದು. ಪರಿಣಾಮವಾಗಿ, ಯೋಜನಾ ಕಾರ್ಯವು ಅತಿ ಕೇಂದ್ರೀಕೃತವಾಗಿದ್ದು, ಪ್ರಜಾಸತ್ತಾತ್ಮಕವಾಗಿ ರಾಜ್ಯ ಹಾಗೂ ಜಿಲ್ಲಾ ಮಟ್ಟದಿಂದ ಜನರ ಅಗತ್ಯತೆಗಳನ್ನು ಪ್ರತಿಬಿಂಬಿಸಲು ಆಯೋಗ ಅಸಮರ್ಥವಾಗಿದೆ.

ಹಿಂದೆ ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಮಹಲನೋಬಿಸ್, ವಿ. ಕೆ. ಆರ್. ವಿ. ರಾವ್, ಗಾಡ್ಗೀಳ್, ಲಕ್ಡವಾಲ, ಮುಂತಾದವರ ಮಾರ್ಗದರ್ಶನದಲ್ಲಿ ಯೋಜನಾ ಆಯೋಗ ಅಲ್ಪ ಸ್ವಲ್ಪ ಸ್ವಾತಂತ್ರ್ಯ, ನಿಷ್ಪಕ್ಷಪಾತ, ಪ್ರೌಢಿಮೆ ಹೊಂದಿತ್ತು. ಕೇಂದ್ರ ಸರಕಾರದ ಧೋರಣೆ ಸರಿಗಾಣದಾಗ, ಗಾಡ್ಗೀಳರಂತಹ ಉಪಾಧ್ಯಕ್ಷರು ರಾಜಿನಾಮೆ ನೀಡಿದ ಉದಾತ್ತ ಉದಾಹರಣೆಗಳೂ ಇವೆ. ಇಂದು ರಾಜೀವ್ ಗಾಂಧಿ ಮತ್ತು ಅವರ ಸಂಪುಟಕ್ಕೆ ಯೋಜನಾ ಆಯೋಗದ ಮೇಲೆ ಹೆಚ್ಚು ಗೌರವ ಉಳಿದಿಲ್ಲ. ಅದಕ್ಕೆ ಸಂವಿಧಾನದ ಅಥವಾ ಶಾಸನದ ಆಧಾರ ನೀಡಿ ಬಲಪಡಿಸುವ ಮನಸ್ಸಿಲ್ಲ. ಅದರ ಅಳಿದುಳಿದ ಕೆಲವು ಜವಾಬ್ದಾರಿಯನ್ನೂ ಅರ್ಥ ಶಾಸ್ತ್ರದ ಅರಿವಿಲ್ಲದ, ಪ. ಬಂಗಾಳದ ಎಡರಂಗ ಸರಕಾರವನ್ನು ಕಿತ್ತು ಬಂಗಾಳಕೊಲ್ಲಿಗೆ ಎಸೆಯಬೇಕೆಂದು ಸದಾ ಬೆದರಿಸುತ್ತಿರುವ ಅಪ್ಪಟ ರಾಜಕೀಯ ವ್ಯಕ್ತಿ ಘನಿಖಾನ್ ಚೌಧುರಿಯ ಹೊಸ ಮಂತ್ರಿ ಶಾಖೆಗೆ ವಹಿಸಿಕೊಡಲಾಗಿದೆ. ಯೋಜನಾ ಆಯೋಗದ ಮೂರು ತಜ್ಞ ಸಮಿತಿಯ ವರದಿಗಳನ್ನು – ಯೋಜನಾವೆಚ್ಚ ಹಣದುಬ್ಬರಕ್ಕೆ ಆಸ್ಪದ ನೀಡಬಾರದೆಂದು ರಂಗರಾಜನ್ ಸಮಿತಿಯ ವರದಿ, ಕೇಂದ್ರ ನಿಯೋಜಿತ ಯೋಜನೆಗಳನ್ನು ವಿಸ್ತರಿಸದೆ ರಾಜ್ಯಗಳಿಗೇ ಬಿಟ್ಟು ಕೊಡಬೇಕೆಂಬ ರಾಮಮೂರ್ತಿ ಸಮಿತಿಯ ವರದಿ, ಮತ್ತು ಕೇಂದ್ರ ಸರಕಾರದ ಅಭಿವೃದ್ಧಿ ವೆಚ್ಚದ ಮೇಲೆ ನಿಯಂತ್ರಣ ಸೂಚಿಸುವ ಕಾರ್ತಿಕೇಯನ್ ಸಮಿತಿಯ ವರದಿ–ಕೇಂದ್ರ ಸರಕಾರದ ಒಳ ಒತ್ತಡಕ್ಕೆ ಮಣಿದು, ಯೋಜನಾ ಆಯೋಗವೇ ತಿರಸ್ಕರಿಸಿದೆ. ಆಯೋಗದ ಅಧ್ಯಕ್ಷರಾದ ಮನಮೋಹನ್ ಸಿಂಘ್ ತನ್ನ ಸ್ಥಾನಮಾನ ಕಳೆದುಕೊಂಡರೂ ರಾಜೀವ್ ಗಾಂಧಿಯ ಹೊಗಳು ಭಟ್ಟರಾಗಿ ಉಳಿದಿದ್ದಾರೆ. ಕಳೆದ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಸಭೆಯಲ್ಲಿ ರಾಜೀವ್ ಗಾಂಧಿಯ ಹೊಸ ಆರ್ಥಿಕ ನೀತಿಯನ್ನು ರಾಜಿವ್ ಗಾಂಧಿಯ ಡೈನಾಮಿಕ್ ನಾಯಕತ್ವವನ್ನೂ ಹೊಗಳಿದ್ದೇ ಅಲ್ಲದೆ, ಭಾರತಕ್ಕೆ "ಯೋಜನೆ"ಯು ನೆಹರು ಕುಟುಂಬದ ವರದಾನವಾಗಿದೆ ಎಂದೂ ಘೋಷಿಸಿದರು !

ರಾಷ್ಟ್ರೀಯ ಅಭಿವೃದ್ಧಿ ಮಂಡಳಿಗೂ ಸಂವಿಧಾನದ ಅಥವಾ ಶಾಸನದ ಆಧಾರವಿಲ್ಲ. ಇದರಲ್ಲಿ ರಾಜ್ಯಗಳ ಮುಖ್ಯ ಮಂತ್ರಿಗಳು ಭಾಗವಹಿಸ ಬಹುದಾ

ದರೂ, ಇದರ ಸಭೆ ಸೇರುವುದೇ ಅಪರೂಪ. ಒಂದೆರಡು ದಿನಗಳ ಔಪಚಾರಿಕ ಅಧಿವೇಶನದಲ್ಲಿ ರಾಜ್ಯಗಳ ವಿಶಿಷ್ಟ ಸಮಸ್ಯೆಗಳ ಕುರಿತಾಗಲೀ, ರಾಷ್ಟ್ರದ ಸಾಮಾನ್ಯ ಆರ್ಥಿಕ ವಿಷಯಗಳ ಕುರಿತಾಗಲೀ ಕೂಲಂಕುಶವಾಗಿ ಗಂಭೀರ ವಾಗಿ ಚರ್ಚಿಸಲು ಅಸಾಧ್ಯ. ಇಲ್ಲಿ ಭಿನ್ನಾಭಿಪ್ರಾಯಗಳನ್ನು ಸಹಿಸಲಾಗು ವುದಿಲ್ಲ. ರಾಜಕೀಯ ವಿಷಯಗಳನ್ನು ಇಲ್ಲಿ ಎತ್ತುವಂತಿಲ್ಲ. 1984 ರಲ್ಲಿ ಜಮ್ಮು – ಕಾಶ್ಮೀರದ ಡಾ|| ಫರೂಕ್ ಅಬ್ದುಲ್ಲಾರ ಸರಕಾರವನ್ನು ಕಿತ್ತು ಹಾಕಿದುದರ ವಿರುದ್ಧ ಪ. ಬಂಗಾಳ, ತ್ರಿಪುರಾ, ಕರ್ನಾಟಕ, ಆಂಧ್ರಪ್ರದೇಶದ ಕಾಂಗ್ರೆಸ್ಸೇತರ ಮುಖ್ಯ ಮಂತ್ರಿಗಳು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಪ್ರತಿಭಟಿಸಲು ಪ್ರಯತ್ನಿಸಿ ವಿಫಲರಾಗಿ ಸಭಾತ್ಯಾಗ ಮಾಡಬೇಕಾಯಿತು. ಅದರ ವಿರುದ್ಧ ಕಾಂಗ್ರೆಸ್ ಮುಖ್ಯಮಂತ್ರಿಗಳು, ಕೇಂದ್ರ ಮಂತ್ರಿಗಳು ಮಂಡಳಿ ಯಲ್ಲಿ ತಮ್ಮ ಅಸಮಾಧಾನ ಸೂಚಿಸುವ ಗೊತ್ತುವಳಿಯೊಂದನ್ನು ಅಂಗೀಕರಿಸಿ ದರು. ಅದನ್ನು ಹಿಂತೆಗೆದು ಕೊಳ್ಳುವ ಗೊತ್ತುವಳಿಯನ್ನು ಈ ಸಲದ ಮಂಡಳಿಯ ಸಭೆಯಲ್ಲಿ ಪ. ಬಂಗಾಳದ ಮುಖ್ಯಮಂತ್ರಿ ಕಾ || ಜ್ಯೋತಿ ಬಸು ಒತ್ತಾಯಿಸಿದಾಗ ಕಾಂಗ್ರೆಸ್ ಮುಖ್ಯಮಂತ್ರಿಗಳಿಂದಲೂ ಕೇಂದ್ರ ಮಂತ್ರಿ ಗಳಿಂದಲೂ ತೀವ್ರ ಪ್ರತಿಭಟನೆಯನ್ನು ಎದುರಿಸಬೇಕಾಯಿತು

ಕಾ|| ಬಸು ಮತ್ತು ತ್ರಿಪುರಾದ ಮುಖ್ಯಮಂತ್ರಿ ಕಾ| ನೃಪೇನ್ ಚಕ್ರವರ್ತಿ ಯೋಜನೆಯ ಗುರಿ ಧೋರಣೆಗಳ ಬಗ್ಗೆ, ಅವುಗಳ ಅನುಷ್ಠಾನದ ವಿಧಾನಗಳ ಬಗ್ಗೆ ತಮ್ಮ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದಾಗ, ಸತಃ ಪ್ರಧಾನಿ ರಾಜೀವ ಗಾಂಧಿಯೇ ತಾಳ್ಮೆಗೆಟ್ಟರು. ಏಳನೇ ಯೋಜನೆಯಿಂದ ಬೇರೆ ಉಳಿಯಿರಿ ಎಂದು ಸವಾಲು ಹಾಕಿದರು ! ಒಕ್ಕೂಟದಿಂದ ಬೇರೆ ಉಳಿಯಿರಿ ಎಂದು ಒಕ್ಕೂಟದ ಪ್ರಧಾನಿಯೇ ರಾಜ್ಯಗಳಿಗೆ ಬೆದರಿಕೆ ನೀಡಿ ದಂತಾಯಿತು ! ಏಳನೇ ಯೋಜನೆಯ ಪ್ರತಿಗಳನ್ನು ಸಾರ್ವಜನಿಕರಿಗೆ ಒದಗಿಸ ಬೇಕೆಂದೂ ಅದರ ಕುರಿತು ರಾಷ್ಟ್ರವ್ಯಾಪಿ ವಿಚಾರ ವಿನಿಮಯ ನಡೆಯ ಬೇಕೆಂದೂ, ರಾಜ್ಯ ಸರಕಾರಗಳ ತಜ್ಞರ, ರಾಜಕೀಯ ಪಕ್ಷಗಳ, ಸಾಮೂಹಿಕ ಸಂಘಟನೆಗಳ ಅಭಿಪ್ರಾಯಗಳನ್ನು ಪರಿಶೀಲಿಸಬೇಕೆಂದೂ, ಮೂರು ತಿಂಗಳ ನಂತರ ಪುನಃ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಸಭೆ ಸೇರಿಸಿ ಅಲ್ಲಿ

ರಾಷ್ಟ್ರೀಯ ಒಟ್ಟು ಅಭಿಪ್ರಾಯಗಳ ಆಧಾರದಲ್ಲಿ ಏಳನೇ ಯೋಜನೆಯನ್ನು ಅಂಗೀಕರಿಸಬೇಕೆಂದೂ ಕಾ. ಬಸು ಮತ್ತು ಕಾ. ಚಕ್ರವರ್ತಿ ಸಲಹೆ ನೀಡಿದ್ದರು. ಆದರೆ, ಕಾಂಗ್ರೆಸ್ ಬ್ರೂಟ್ ಮೆಜಾರಿಟಿ ಇರುವ ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಈ ನ್ಯಾಯಯುತ ಪ್ರಜಾಸತ್ತಾತ್ಮಕ ಸಲಹೆಗಳನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿತು. ಇಂತಹ ಅಸಹನೆ ಮತ್ತು ಅಸಹಕಾರ ಪ್ರಜಾಪ್ರಭುತ್ವಕ್ಕೆ, ಒಕ್ಕೂಟ ತತ್ವಕ್ಕೆ, ರಾಷ್ಟ್ರೀಯ ಐಕ್ಯತೆಗೆ ಕಳಂಕ ಮತ್ತು ಅಪಾಯ.

## ಪರ್ಯಾಯ ಮಾರ್ಗ

ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ, ಅದರ ನೇತೃತ್ವದ ಹಿಂದಿನ ಕೇರಳ ಮತ್ತು ಇಂದಿನ ಪ. ಬಂಗಾಳ ಮತ್ತು ತ್ರಿಪುರಾ ರಾಜ್ಯ ಸರಕಾರಗಳು ಮತ್ತು ಅಕ್ಟೋಬರ್ 1983ರಲ್ಲಿ ಶ್ರೀನಗರದಲ್ಲಿ ನಡೆದ ವಿರೋಧ ಪಕ್ಷಗಳ ಸಮಾವೇಶ ಈ ಕುರಿತು ಗಮನಾರ್ಹ ಪರ್ಯಾಯ ಮಾರ್ಗ ಸೂಚಿಸಿವೆ.

ಮುಖ್ಯವಾಗಿ ರಾಷ್ಟ್ರೀಯ ಯೋಜನಾ ಆಯೋಗಕ್ಕೆ ಮತ್ತು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಗೆ ಸಂವಿಧಾನದ ಆಧಾರ ನೀಡಬೇಕು. ಚುನಾವಣಾ ಆಯೋಗ ಮತ್ತು ಹಣಕಾಸು ಆಯೋಗಗಳಂತೆ, ಯೋಜನಾ ಆಯೋಗವು ಕೇಂದ್ರ ಸರಕಾರದ ನೇರ ನಿಯಂತ್ರಣದಿಂದ ಮುಕ್ತವಾಗಿರಬೇಕು. ಯೋಜನಾ ಆಯೋಗವು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಕಾರ್ಯ ನಿರ್ವಾಹಕ ಸಂಸ್ಥೆಯಾಗಿ ಕೆಲಸ ಮಾಡಬೇಕು. ಈ ಎರಡೂ ಸಂಸ್ಥೆಗಳು ಕೇಂದ್ರ ಹಾಗೂ ರಾಜ್ಯ ಸರಕಾರಗಳ ಪ್ರತಿನಿಧಿಗಳನ್ನು ಹೊಂದಿದ್ದು ಅವುಗಳ ಜಂಟಿ ಹಣಕಾಸು ನೆರವಿನಿಂದ ಕಾರ್ಯ ನಡೆಸಬೇಕು. ಯೋಜನಾ ಆಯೋಗವು ದೇಶದ ಅತ್ಯಂತ ಕೆಳಮಟ್ಟದದಿಂದ (ಪಂಚಾಯತ್ – ಜಿಲ್ಲೆ – ರಾಜ್ಯ– –ಪ್ರದೇಶ) ರಾಷ್ಟ್ರೀಯ ಮಟ್ಟದ ವರೆಗಿನ ಜನರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಸ್ವತಂತ್ರ ಅಧ್ಯಯನ ಮಾಡಿ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿಗೆ ಅಲ್ಪಕಾಲದ ಮತ್ತು ದೀರ್ಘ ಕಾಲದ ಯೋಜನೆಯ ಕುರಿತು ಸೂಕ್ತ ಸಲಹೆ ಮಾಡಬೇಕು. ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆ, ಬಡತನ, ನಿರುದ್ಯೋಗ, ಅನಕ್ಷರತೆ, ಹರಿಜನ–ಗಿರಿಜನ ಸಂಖ್ಯೆ,

ನಿರಾಶ್ರಿತರ ಸಂಖ್ಯೆ, ನೀರಾವರಿ ಸೌಕರ್ಯ, ವಿದ್ಯುತ್ ಉತ್ಪಾದನಾ ಶಕ್ತಿ, ಕೈಗಾರಿಕೀಕರಣ ಇತ್ಯಾದಿ ಮೂಲಭೂತ ವಿಷಯಗಳನ್ನು ಯೋಜನಾ ಆಯೋಗ ತನ್ನ ಅಧ್ಯಯನದಲ್ಲಿ ಪರಿಶೀಲಿಸಬೇಕು. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು, ಯೋಜನಾ ಆಯೋಗದ ಸಲಹೆಯ ಆಧಾರದಲ್ಲಿ ಪಂಚವಾರ್ಷಿಕ ಯೋಜನೆಯ ಕರಡು ಸಿದ್ಧಪಡಿಸಿ, ರಾಷ್ಟ್ರೀಯ ಅಭಿಪ್ರಾಯಗಳಿಗೆ ಅವಕಾಶ ನೀಡಬೇಕು. ಅವುಗಳ ಆಧಾರದಲ್ಲಿ ಅಂತಿಮವಾಗಿ ಯೋಜನೆಯನ್ನು ರೂಪಿಸಿ, ಕೇಂದ್ರ, ರಾಜ್ಯ, ಜಿಲ್ಲೆ, ಪಂಚಾಯತು ಮಟ್ಟಗಳಲ್ಲಿ ಜನರ ನೇರ ಸಂಪರ್ಕ-ಸಹಕಾರದಿಂದ ಕಾರ್ಯರೂಪಕ್ಕಿಳಿಸಬೇಕು. ಯೋಜನೆಯನ್ನು ರೂಪಿಸುವಲ್ಲಿ ಹಾಗೂ ಕಾರ್ಯಗತಗೊಳಿಸುವಲ್ಲಿ ಸಾರ್ವಜನಿಕರು ರಾಜಕೀಯ ಪಕ್ಷಗಳ, ಸಾಮೂಹಿಕ ಸಂಘಟನೆಗಳ, ತಜ್ಞರ ಸಲಹೆ-ಸಹಕಾರಗಳನ್ನು ಪಡೆಯಬೇಕು. ಆಗ ಮಾತ್ರ ಯೋಜನೆಯು ಜನಪರವಾದೀತು. ಇಲ್ಲವಾದರೆ, ಭೂಮಾಲಿಕರ ಬಂಡವಾಳಶಾಹಿಗಳ, ಬಹುರಾಷ್ಟ್ರೀಯ ಸಂಸ್ಥೆಗಳ ಪರವಾಗಿಯೇ ಉಳಿಯುವುದು.

೨

## ಯೋಜನೆಗೆ ಸಂಪನ್ಮೂಲಗಳ ಅಭಾವ

ಯೋಜನಾ ಆಯೋಗದ ಅವನತಿಯು ಮತ್ತು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ನಿಷ್ಪ್ರಯೋಜನದ ಹಿನ್ನೆಲೆಯಲ್ಲಿ ಏಳನೇ ಪಂಚವಾರ್ಷಿಕ ಯೋಜನೆಯು ಒಂದು ಔಪಚಾರಿಕ ಕಸರತ್ತು ಎಂದು ಹಿಂದಿನ ಲೇಖನದಲ್ಲಿ ಗಮನಿಸಿದೆವು. ಈ ಲೇಖನದಲ್ಲಿ ಹೊಸ ಯೋಜನೆಯು ಸಂಪನ್ಮೂಲಗಳ ಅಭಾವದಿಂದ ತೀವ್ರ ದುಃಸ್ಥಿತಿಯನ್ನೆದುರಿಸುತ್ತಿರುದನ್ನು ವಿಶ್ಲೇಷಿಸಲಾಗಿದೆ.

ಏಳನೇ ಯೋಜನೆಯು ಸಂಪನ್ಮೂಲ ಸಂಗ್ರಹಣೆಯಲ್ಲಿ ಅನೇಕ ಅನಿಶ್ಚಿತೆಗಳನ್ನು ಎದುರಿಸುತ್ತಿವೆ. ಮೊದಲನೆಯದಾಗಿ, ಯೋಜನೆಯ ಒಟ್ಟು ಮೊತ್ತ ಸಾರ್ವಜನಿಕ ಹಾಗೂ ಖಾಸಗೀ ರಂಗಗಳಲ್ಲಿ ರೂ. 3,48, 148 ಕೋಟಿ ಎಂದು ಹೇಳಲಾಗಿದೆ. ಒಂದು ವರ್ಷದ ಹಿಂದೆ, ಯೋಜನೆಯ ಕರಡು ರೂಪದಲ್ಲಿ ಈ ಮೊತ್ತ 1984-85 ರ ಬೆಲೆ ಮಟ್ಟದಲ್ಲಿರುವುದು ಎಂದು ತಿಳಿದುಬಂದಿದೆ. ಕಳೆದ ಒಂದು ವರ್ಷದಲ್ಲಿ ಸಗಟು ಮಾರುಕಟ್ಟೆಯ ಮತ್ತು ಗ್ರಾಹಕರ ಬೆಲೆ ಸೂಚಿಗಳು ಗಣನೀಯವಾಗಿ ಏರಿರುವುದರಿಂದ ಯೋಜನೆಯ ಗಾತ್ರದ ಮೌಲ್ಯವು ಅಷ್ಟೇ ಪ್ರಮಾಣದಲ್ಲಿ ಇಳಿದಿರುವುದನ್ನು ಗಮನಿಸಬೇಕು. ಬೆಲೆ ಮಟ್ಟದ ನಿರಂತರ ಅಸ್ಥಿರತೆಯಿಂದಾಗಿ, ಯೋಜನೆಯ ಮೊತ್ತದ ನಿಜ ಮೌಲವು, ಮುಂದಿನ ವರ್ಷಗಳಲ್ಲಿ ಇನ್ನಷ್ಟು ಕಡಿಮೆಯಾಗುವುದು.

ಯೋಜನೆಯ ಒಟ್ಟು ಮೊತ್ತದಲ್ಲಿ ರೂ. 20000 ಕೋಟಿ ರೂ.18000 ಕೋಟಿ ಸಾರ್ವಜನಿಕ ರಂಗಕ್ಕೆ ಮತ್ತು ರೂ. 2000 ಕೋಟಿ ಖಾಸಗೀ ರಂಗಕ್ಕೆ ಸಂಪನ್ಮೂಲ ವಿದೇಶಿ ನೆರವಿನಿಂದ ಎಂದು ನಿರೀಕ್ಷಿಸಲಾಗಿದೆ. ಇತ್ತೀಚೆಗಿನ ವರ್ಷಗಳಲ್ಲಿ ವಿಶ್ವಬ್ಯಾಂಕ್, ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ, ಇತರ

ವಿದೇಶಿ ಮೂಲಗಳು - ಮುಖ್ಯವಾಗಿ ಅಭಿವೃದ್ಧಿ ಹೊಂದಿದ ಬಂಡವಾಳಶಾಹಿ ರಾಷ್ಟ್ರಗಳು ಭಾರತಕ್ಕೆ ಸಾಲ ಸಹಾಯ ಕೊಡಲು ಕಠಿಣ ರಾಜಕೀಯ ಹಾಗೂ ಆರ್ಥಿಕ ಶರತ್ತುಗಳನ್ನು ವಿಧಿಸುತ್ತಿವೆ. ಈ ವಿದೇಶಿ ಮೂಲಗಳು ನೆರವು ನೀಡಲು ಭಾರತವನ್ನು ಆದ್ಯತೆಯ ದೇಶ ಎಂದು ಪರಿಗಣಿಸುತ್ತಿಲ್ಲ. ಅವುಗಳ ನೆರವು ಹೆಚ್ಚಾಗಿ ಮುಕ್ತ ಮಾರುಕಟ್ಟೆಯ, ಹೆಚ್ಚು ಬಡ್ಡಿಯ, ಖಾಸಗೀ ರಂಗಕ್ಕೆ ಆದ್ಯತೆಯ ಆಧಾರಗಳಲ್ಲಿರುವುದು. ಆದುದರಿಂದ ವಿದೇಶಿ ನೆರವು ನಿರೀಕ್ಷಿಸಿದಷ್ಟು ಪಡೆಯಬೇಕಾದರೆ, ದೇಶದ ಸ್ವಾತಂತ್ರ್ಯ, ಸಾರ್ವಭೌಮತೆ, ಸ್ವಾವಲಂಬನೆ ಗಳನ್ನು ಕಡೆಗಣಿಸುವ ಮತ್ತು ಸಾಲದ ಬಲೆಯಲ್ಲಿ ಬಿಗಿಯುವ ಅಪಾಯ ವಿರುವುದು. ನೆರವು ನೀಡುವ ನೆಪದಲ್ಲಿ ವಿದೇಶಿ ಶಕ್ತಿಗಳು ಬೇಹುಗಾರಿಕೆ, ವಿಚ್ಛಿದ್ರಕಾರಿ ಶಕ್ತಿಗಳ ಪ್ರಚೋದನೆ ಇತ್ಯಾದಿ ಚಟುವಟಿಕೆಗಳಲ್ಲಿ ಪ್ರವೇಶಿಸಿ ರಾಷ್ಟ್ರೀಯ ಐಕ್ಯತೆಗೂ ಅಪಾಯವಿರುವುದು. ನಿರೀಕ್ಷಿಸಿದಷ್ಟು ವಿದೇಶಿ ನೆರವು ಸಿಗದಿದ್ದರೆ, ಆಂತರಿಕವಾಗಿ ಜನಕೋಟಿಯನ್ನು ಇನ್ನಷ್ಟು ಕೊರತೆ ಹಣ ಸೃಷ್ಟಿ, ತೆರಿಗೆ ಭಾರ, ಅವಶ್ಯಕ ವಸ್ತುಗಳ ಬೆಲೆ ಏರಿಕೆ, ಇತ್ಯಾದಿ ವಿಧಾನಗಳಿಂದ ಸುಲಿಯಬೇಕಾಗುವುದು.

ಏಳನೇ ಯೋಜನೆಗೆ ಸಂಪನ್ಮೂಲ ಗಳಿಸುವ ಇನ್ನೊಂದು ಪ್ರಧಾನ ಮಾಧ್ಯಮ ರಫ್ತು ಗಳಿಕೆ. ಅದಕ್ಕಾಗಿ, ಹೊಸ ಆರ್ಥಿಕ ನೀತಿಯಲ್ಲಿ ಉದಾರ ಆಮದು ನೀತಿ, ರಫ್ತು ವ್ಯಾಪಾರಕ್ಕೆ ಭಾರೀ ಪ್ರೋತ್ಸಾಹ, ಆದರೆ ಯೋಜನೆಯ ಮೊದಲ ವರ್ಷದಲ್ಲಿಯೇ (1985-86), ಏಪ್ರಿಲ್-ಜುಲೈ ಅವಧಿ ಯಲ್ಲಿ ರಫ್ತು ರೂ. 2942 ಕೋಟಿಗೇ ಸ್ಥಗಿತಗೊಂಡಿದೆ. ಕಳೆದ ವರ್ಷ ಈ ಅವಧಿಯಲ್ಲಿ ರಫ್ತು ರೂ. 2930 ಕೋಟಿಯಾಗಿತ್ತು. ಆಮದು ರೂ. 4634 ಕೋಟಿಯಿಂದ ರೂ. 6021 ಕೋಟಿಗೆ ನೆಗೆದಿದೆ ! ಪರಿಣಾಮವಾಗಿ ಜುಲೈ 85ರಲ್ಲಿ ರೂ. 3000 ಕೋಟಿಗೂ ಹೆಚ್ಚಿನ ವಿದೇಶಿ ವ್ಯಾಪಾರದಲ್ಲಿ ಕೊರತೆ ಉಂಟಾಗಿದೆ. ವರ್ಷಾಂತ್ಯದಲ್ಲಿ ಕೊರತೆ ರೂ. 9000 ಕೋಟಿಗೆ ಏರಲಿದೆ ! 1984-85 ರಲ್ಲಿ ಕೊರತೆ ರೂ, 5325 ಕೋಟಿಯಷ್ಟಾಗಿತ್ತು (ಫೈನಾನ್ಸಿಯಲ್ ಎಕ್ಸ್‌ಪ್ರೆಸ್ : 8-11-85). ಈಗಾಗಲೇ ನಮ್ಮ ದೇಶದ

ವಿದೇಶಿ ಸಾಲದ ಹೊರೆ ರೂ. 20000 ಕೋಟಿಗೂ ಮೀರಿದೆ ! ಹೆಚ್ಚುತ್ತಿರುವ ವಿದೇಶಿ ವ್ಯಾಪಾರದ ಕೊರತೆಯನ್ನು ನೀಗಿಸಲು ಆಂತರಿಕ ಮಾರುಕಟ್ಟೆಯನ್ನು ಅಲಕ್ಷಿಸಿ, ಇನ್ನಷ್ಟು ಅಗ್ಗದಲ್ಲಿ ಹೆಚ್ಚು ಸಾಮಗ್ರಿಗಳನ್ನು ರಫ್ತು ಮಾಡಬೇಕು ; ಅಥವಾ, ಇನ್ನಷ್ಟು ವಿದೇಶಿ ಸಾಲ ಸಹಾಯಗಳಿಗೆ ಕೈ ಒಡ್ಡಬೇಕು. ಆಗ, ಸ್ವಾವಲಂಬನೆಯ ಗುರಿ ದೂರ ಉಳಿದು, ಸಾಲದ ಬಲೆ ಬಿಗಿಯುವುದು, ಯೋಜನೆಯ ಗುರಿ ಸೋಲುವುದು.

ಏಳನೇ ಯೋಜನೆಯ ಅವಧಿಯಲ್ಲಿ ಆಂತರಿಕವಾಗಿ ಸಂಗ್ರಹಿಸಬೇಕಾದ ಸಂಪನ್ಮೂಲದಲ್ಲಿ ರೂ. 35000 ಕೋಟಿ ಸಾರ್ವಜನಿಕ ರಂಗದ ಲಾಭಗಳಿಕೆಯ ಪಾಲು ಎಂದು ನಿರೀಕ್ಷಿಸಲಾಗಿದೆ. ಇದುವರೆಗಿನ ಅನುಭವದಿಂದ ಈ ನಿರೀಕ್ಷೆಯೂ ಮೃಗ ಮರೀಚಿಕೆ ಆದೀತು. ಅನೇಕ ಸಾರ್ವಜನಿಕ ಕೈಗಾರಿಕಾ ಸಂಸ್ಥೆಗಳು ಈಗಾಗಲೇ ನಷ್ಟ ಅನುಭವಿಸುತ್ತಿರುವಾಗ, ಮುಂದಿನ ವರ್ಷಗಳಲ್ಲಿ ನಷ್ಟ ನಿವಾರಿಸಿ, ಭಾರಿ ಪ್ರಮಾಣದಲ್ಲಿ ಲಾಭಗಳಿಸಲಿರುವುವು ಎಂದರೆ ನಂಬಲಾಗದು. ಆಧುನೀಕರಣ, ಆಂತರಿಕ ಮಾರುಕಟ್ಟೆಯ ವಿಸ್ತರಣೆ, ಉತ್ಪಾದನೆಯ ನ್ಯಾಯ ವಿತರಣೆ, ಆಡಳಿತದಲ್ಲಿ ಅಧಿಕಾರಶಾಹಿಗಳ ಹಾಗೂ ಬಂಡವಾಳಶಾಹಿಗಳ ಪ್ರಭಾವ ಕಡಿಮೆಯಾಗಿ ಕಾರ್ಮಿಕರ ಪ್ರಾಮಾಣಿಕ ಮತ್ತು ಪರಿಣಾಮಕಾರಿ ಪಾತ್ರ, ಇತ್ಯಾದಿ ಆಮೂಲಾಗ್ರ ಸುಧಾರಣೆಗಳಾಗದೆ, ಸಾರ್ವಜನಿಕ ರಂಗ ಹೆಚ್ಚಿನ ಲಾಭ ಗಳಿಸುವುದು ಅಸಾಧ್ಯ. ಆದುದರಿಂದ ಈ ಕ್ಷೇತ್ರದಿಂದ ಯೋಜನೆಗೆ ಸಂಪನ್ಮೂಲ ಪಡೆಯುವುದೆಂದರೆ, ಅದರ ಉತ್ಪಾದನೆಗಳ ಬೆಲೆಗಳನ್ನು ಅವೈಜ್ಞಾನಿಕವಾಗಿ ಆಡಳಿತ ನಿರ್ದೇಶನಗಳಿಂದ ಹೆಚ್ಚಿಸಿ, ಜನಸಾಮಾನ್ಯರ ಮೇಲೆ ಅಪ್ರತ್ಯಕ್ಷವಾಗಿ ಅದರ ಭಾರವನ್ನು ಹೇರುವುದು ಅಷ್ಟೆ. ಈ ವಿಧಾನದಿಂದ, ಕೇಂದ್ರ ಸರ್ಕಾರದ ಕ್ಷೇತ್ರಕ್ಕೆ ಸಿಗುವ ಸಂಪನ್ಮೂಲದಲ್ಲಿ ರಾಜ್ಯ ಸರ್ಕಾರಗಳಿಗೆ ಪಾಲು ದೊರೆಯುವುದಿಲ್ಲ. ಪರಿಣಾಮವಾಗಿ ರಾಜ್ಯ ಸರಕಾರಗಳು ಸಂಪನ್ಮೂಲ ಕೊರತೆಯನ್ನು ಹೆಚ್ಚು ಅನುಭವಿಸಬೇಕಾಗುವುದು. ಸಾರ್ವಜನಿಕ ರಂಗದ ಉಕ್ಕು, ಕಲ್ಲಿದ್ದಲು, ತೈಲ, ಸಾರಿಗೆ-ಸಂಪರ್ಕ, ವಿದ್ಯುತ್, ನೀರಾವರಿ, ಗೊಬ್ಬರ, ಇತ್ಯಾದಿಗಳ ದರಗಳನ್ನು ಕೇಂದ್ರ ಮತ್ತು

ರಾಜ್ಯ ಸರಕಾರಗಳು ಏರಿಸುತ್ತಾ ಹೋಗುವುದರಿಂದ ಬೆಲೆ ಏರಿಕೆ ಹಣದುಬ್ಬರ ಹೆಚ್ಚಿ ಯೋಜನಾ ವೆಚ್ಚವೇ ಹೆಚ್ಚುವುದು. ಸಂಪನ್ಮೂಲ ಸಂಗ್ರಹಣೆ ಇನ್ನಷ್ಟು ದುಃಸ್ಥಿತಿಗೊಳಗಾಗುವುದು. ಯೋಜನೆಯ ಗುರಿ - ಧೋರಣೆಗಳು ಅಂತಿಮವಾಗಿ ವಿಫಲಗೊಳ್ಳುವುವು. ಈ ವಿಧಾನ, ಘಾಯಗೊಂಡ ಹುಲಿ ತನ್ನ ದೇಹದ ಭಾಗವನ್ನೇ ಕಡಿದು ಘಾಯ ಮುಚ್ಚಿಕೊಂಡಂತೆ !

## ತೆರಿಗೆ ಮತ್ತು ಕೊರತೆ ಹಣಕಾಸು

ಸಾರ್ವಜನಿಕ ರಂಗದ ಲಾಭ ಗಳಿಕೆ ಮತ್ತು ಹೆಚ್ಚಿನತೆರಿಗೆಗಳ ಮೂಲಕ ಏಳನೇ ಯೋಜನೆಗೆ ಒಟ್ಟು ರೂ. 46,700 ಕೋಟಿ ಸಂಪನ್ಮೂಲ ಸಂಗ್ರಹಿಸ ಬೇಕೆಂದು ಅಂದಾಜು ಮಾಡಲಾಗಿದೆ. ಕೇಂದ್ರದ ಪಾಲು ರೂ. 10000 ಕೋಟಿ, ರಾಜ್ಯಗಳ ಪಾಲು ರೂ. 36,700 ಕೋಟಿ. ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ತೆರಿಗೆಗಳ ಒಟ್ಟು ಸಂಗ್ರಹ 1984-85 ರಲ್ಲಿ ರಾಷ್ಟ್ರೀಯ ಆದಾ ಯದ ಶೇ 16.6 ದರದಲ್ಲಿದ್ದರೆ ಹೊಸ ಯೋಜನೆಯ ಕೊನೆಯ ವರ್ಷದಲ್ಲಿ (1989-90) ಶೇ. 19ಕ್ಕೆ ಏರಿಸುವ ಗುರಿ ಇದೆ. ಈ ಗುರಿಯನ್ನು ಸಾಧಿಸು ವುದೂ ಅಸಾಧ್ಯ. ಒಟ್ಟು ತೆರಿಗೆ ಸಂಗ್ರಹದಲ್ಲಿ ವೈಯಕ್ತಿಕ ಆದಾಯ ಹಾಗೂ ಸಂಪತ್ತು ಮತ್ತು ಕೈಗಾರಿಕೋದ್ಯಮಗಳ ಆದಾಯ ತೆರಿಗೆಗಳ ಪಾಲು ವರ್ಷ ವರ್ಷಕ್ಕೂ ಕಡಿಮೆಯಾಗುತ್ತಿದೆ. (1952-55 : 41.1% 1984-85 : 14.3%). ಜನರ ಜೀವನಾವಶ್ಯಕ ವಸ್ತುಗಳ ಮೇಲಿನ ಮತ್ತು ಕೃಷಿ ಕೈಗಾರಿಕೋದ್ಯಮಗಳಿಗೆ ಅಗತ್ಯವಾದ ವಸ್ತುಗಳ ಮೇಲಿನ ಮಾರಾಟ, ಅಬ ಕಾರಿ ಸುಂಕ, ಇತ್ಯಾದಿ ಅನೇಕ ಅಪ್ರತ್ಯಕ್ಷ ತೆರಿಗೆಗಳ ಪಾಲು ಹೆಚ್ಚಾಗುತ್ತಿದೆ (1952-55 : 59.9%; 1984-85 : 85.7%). 1973-74 ರಲ್ಲಿಯೇ ತೆರಿಗೆ ವಿಚಾರಣಾ ಆಯೋಗದ ವರದಿಯಂತೆ, ಶೇ. 55ರಷ್ಟು ಅಪ್ರ ತ್ಯಕ್ಷ ತೆರಿಗೆಯ ಭಾರವು ಮಾಸಿಕ ರೂ. 100 ಕ್ಕಿಂತಲೂ ಕಡಿಮೆ ಆದಾಯ ವಿರುವ ಬಡ ಕುಟುಂಬಗಳ ಮೇಲೆಯೇ ಬಿದ್ದಿತ್ತು. ಕಳೆದ ದಶಕದಲ್ಲಿ ಅಪ್ರ ತ್ಯಕ್ಷ ತೆರಿಗೆಯ ಪಾಲು ಇನ್ನಷ್ಟು ಹೆಚ್ಚಿರುವುದರಿಂದ, ಬಡ ಕುಟುಂಬಗಳ

ಮೇಲಿನ ಕರಭಾರವೂ ಬೆನ್ನು ಮುರಿಯುವಷ್ಟು ಹೆಚ್ಚಿದೆ.

ಆದರೂ, ಹೊಸ ಯೋಜನೆಯು ಸಂಪನ್ಮೂಲ ಸಂಗ್ರಹಿಸಲು ಸಾರ್ವಜನಿಕ ರಂಗದ ಉತ್ಪಾದನೆಗಳ ಬೆಲೆಗಳನ್ನು ಹೆಚ್ಚಿಸುವುದರೊಂದಿಗೇ, ಅಪ್ರತ್ಯಕ್ಷ ತೆರಿಗೆಯನ್ನು ಹೆಚ್ಚು ಅವಲಂಬಿಸುತ್ತದೆ. ಯೋಜನೆಯ ಮೊದಲ ವರ್ಷದಲ್ಲಿಯೇ, ಕೆಲವು ಪ್ರತ್ಯಕ್ಷ ತೆರಿಗೆಗಳನ್ನು ರದ್ದು ಮಾಡಿ, ಇತರ ಪ್ರತ್ಯಕ್ಷ ತೆರಿಗೆಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ. ದೀರ್ಘಕಾಲದ ಹಣಕಾಸು ಧೋರಣೆಯ ನೆಪದಲ್ಲಿ, ಯೋಜನೆಯ ಅವಧಿಯಲ್ಲಿ ವೈಯಕ್ತಿಕ ಆದಾಯ-ಸಂಪತ್ತು ತೆರಿಗೆಗಳಲ್ಲಾಗಲೀ, ಕಂಪೆನಿಗಳ ಆದಾಯ ತೆರಿಗೆಗಳಲ್ಲಾಗಲೀ ಹೆಚ್ಚಳ ಇಲ್ಲ ಎಂದು ಹಣಕಾಸು ಮಂತ್ರಿ ವಿ. ಪಿ. ಸಿಂಘ್ ಈಗಾಗಲೇ ಘೋಷಿಸಿದ್ದಾರೆ. ಶ್ರೀಮಂತ ರೈತರ ಮತ್ತು ಭೂ ಮಾಲಕರ ಕೃಷಿ ಮೂಲ ಆದಾಯಕ್ಕೂ ತೆರಿಗೆ ವಿಧಿಸುವುದಿಲ್ಲ ಎಂದು ಸ್ಪಷ್ಟಪಡಿಸಲಾಗಿದೆ. ಅಂದರೆ ಆರ್ಥಿಕ ಅಭಿವೃದ್ಧಿಗೆ ಸಂಪನ್ಮೂಲ ಒದಗಿಸುವುದು ಬಡವರ ಹೊಟ್ಟೆಗೆ ಹೊಡೆದು ! ಅದರ ಪ್ರತಿಫಲವಾಗಿ ಹೆಚ್ಚಿದ ಆದಾಯ-ಸಂಪತ್ತು ಶ್ರೀಮಂತ ವ್ಯಕ್ತಿಗಳಿಗೂ ಅವರು ನಿಯಂತ್ರಿಸುತ್ತಿರುವ ಕೃಷಿ-ವ್ಯಾಪಾರ-ಕೈಗಾರಿಕೋದ್ಯಮಗಳಿಗೂ ಸ್ವೇಚ್ಛೆಯಿಂದ ಬಳಸಿಕೊಳ್ಳಲು ಬಿಡುವುದು !

ಇವರ ಸ್ವಾಧೀನದಲ್ಲಿ ರೂ 35000 ಕೋಟಿಯಿಂದ ರೂ 70000 ಕೋಟಿಯಷ್ಟು ಕಪ್ಪು ಹಣ ಇರುವುದೆಂದು ವಿವಿಧ ಅಧ್ಯಯನಗಳು ತಿಳಿಸಿವೆ. ಆದರೆ, ಕಪ್ಪು ಹಣವನ್ನು ಹೇಗಾದರೂ ಬಿಳಿ ಮಾಡಿ ಖಾಸಗೀ ರಂಗಕ್ಕೆ ಬಳಸಲು ಪ್ರೋತ್ಸಾಹಿಸಲಾಗುತ್ತಿದೆಯೇ ಹೊರತು, ಅದನ್ನು ಮುಟ್ಟುಗೋಲು ಹಾಕಿ ಅಥವಾ ಅದರ ಮೇಲೆ ಏರಿಕೆಯ ತೆರಿಗೆಯನ್ನಾದರೂ ವಿಧಿಸಿ ಸಾರ್ವಜನಿಕ ರಂಗದ ಯೋಜನಾ ವೆಚ್ಚಕ್ಕೆ ಸಂಪನ್ಮೂಲ ಒದಗಿಸುವತ್ತ ಸರಕಾರ ಕಾರ್ಯನಿರತವಾಗಿಲ್ಲ. ನೆಹರು ಮನೆತನದಿಂದ "ವರದಾನ"ವಾಗಿ ಬಂದ ನಮ್ಮ ದೇಶದ ಪಂಚವಾರ್ಷಿಕ ಯೋಜನೆ ಇದಾಗಿದೆ !

ಯೋಜನೆಯ ಒಟ್ಟು ಮೊತ್ತದಲ್ಲಿ, ರೂ 180,000 ಕೋಟಿ ಸಾರ್ವಜನಿಕ ರಂಗಕ್ಕೆಂದು ನಿರ್ಧರಿಸಲಾಗಿದೆ. ಈ ಕ್ಷೇತ್ರಕ್ಕೆ ಬೇಕಾದ ಸಂಪನ್ಮೂಲ

ಸಂಗ್ರಹಣೆಯಲ್ಲಿ ವಿದೇಶಿ ನೆರವು, ಸಾರ್ವಜನಿಕ ರಂಗದ ಲಾಭ ಗಳಿಕೆ, ತೆರಿಗೆ ಸಂಗ್ರಹಗಳ ಅನಿಶ್ಚಿತೆಗಳೊಂದಿಗೇ, ನಿವ್ವಳ ರೂ. 40000 ಕೋಟಿ ಕೊರತೆಯ ಅನಿಶ್ಚಿತೆಯೂ ಸೇರಿದೆ, ಆದರೆ, ಇನ್ನಷ್ಟು ಹೆಚ್ಚಿನ ದರಗಳಲ್ಲಿ ವಿದೇಶಿ ನೆರವು, ರಾಷ್ಟ್ರೀಯ ಉಳಿತಾಯ, ತೆರಿಗೆ ಸಂಗ್ರಹ ಸಿಗುವುದರಿಂದ ಕೊರತೆಯು ರೂ. 14000 ಕೋಟಿಗೆ ಇಳಿಯಬಹುದೆಂದು ನಿರೀಕ್ಷಿಸಲಾಗಿದೆ. ಹಿಂದಿನ ಅನುಭವಗಳಿಂದ ಈ ನಿರೀಕ್ಷೆ ನಿಜವಾಗುವುದು ಅಸಂಭವ. ಕಳೆದ 38 ವರ್ಷಗಳಲ್ಲಿ ವಾರ್ಷಿಕ ಸರಾಸರಿ ಕೊರತೆ ಹಣ ಸೃಷ್ಟಿ ವಿಪರೀತವಾಗಿ ಏರುತ್ತಾ ಬಂದಿದೆ. ಇಳಿಮುಖವಾಗಲೇ ಇಲ್ಲ. ಏಳನೇ ಯೋಜನೆಯ ಮೊದಲ ವರ್ಷದಲ್ಲಿಯೇ 1985-86 ರ ಕೇಂದ್ರ ಮುಂಗಡ ಪತ್ರದಲ್ಲಿ ರೂ. 3000 ಕೋಟಿ ಕೊರತೆ ಎಂದು ಕಾಣಿಸಲಾಗಿತ್ತು. ಆದರೆ, ಆರು ತಿಂಗಳಲ್ಲಿಯೇ ಮಳೆಗಾಲದ ಸಂಸತ್ ಅಧಿವೇಶನದಲ್ಲಿ ಸಪ್ಲಿಮೆಂಟರಿ ಬೇಡಿಕೆಗಳನ್ನು ಮಂಡಿಸುವಾಗ ರೂ 3000 ಕೋಟಿ ಕೊರತೆ ತೋರಿಸಲಾಗಿದೆ. ವರ್ಷಾಂತ್ಯದಲ್ಲಿ ಕೊರತೆ ರೂ 6000 ಕೋಟಿಗೂ ಮೀರಬಹುದು. ಐದು ವರ್ಷಗಳಲ್ಲಿ ಕೇಂದ್ರ ಮತ್ತು ರಾಜ್ಯಗಳ ಒಟ್ಟು ಕೊರತೆ ರೂ 40000 ಕೋಟಿಗೂ ಮೀರುವ ಸಂಭವವಿದೆ. ವಿದೇಶಿ ನೆರವು, ರಫ್ತುಗಳಿಕೆ, ಸಾರ್ವಜನಿಕ ರಂಗದ ಲಾಭ ಗಳಿಕೆ, ತೆರಿಗೆ ಸಂಗ್ರಹ, ಮೂಲಗಳಿಂದ ನಿರೀಕ್ಷಿಸಿದ ಸಂಪನ್ಮೂಲಗಳ ಸಂಗ್ರಹವಾಗದಿದ್ದರೆ, ಇನ್ನಷ್ಟು ಕೊರತೆ ಹಣ ಸೃಷ್ಟಿಯ ಸುಲಭ ಮಾರ್ಗವನ್ನು ಹಿಡಿಯುವುದು ಅನಿವಾರ್ಯ. ಆಗ ಬೆಲೆ ಏರಿಕೆ-ಹಣದುಬ್ಬರ, ಯೋಜನಾ ವೆಚ್ಚದ ಏರಿಕೆಯಂತಹ ವಿಷವರ್ತುಲ ಉಂಟಾಗುವುದು! ಅಥವಾ, ಯೋಜನೆಯ ಗಾತ್ರವನ್ನೇ ಇನ್ನಷ್ಟೂ ಕಡಿತ ಗೊಳಿಸಿ ಯೋಜನೆಗೇ ವಿರಾಮ ಬೀಳಬಹುದು!

## ಪರ್ಯಾಯ ಮಾರ್ಗ

ಸಡಿಲು ಆಮದು ನೀತಿ, ರಫ್ತು ಪ್ರೋತ್ಸಾಹ, ವಿದೇಶಿ ನೆರವು, ಹೆಚ್ಚು ಅಪ್ರತ್ಯಕ್ಷ ತೆರಿಗೆ, ಭೋಗ ವಸ್ತುಗಳ ಆಂತರಿಕ ಮಾರುಕಟ್ಟೆ, ಖಾಸಗೀ ರಂಗದ

ಮೇಲುಗೈ, ಇತ್ಯಾದಿ ಮಾರ್ಗಗಳನ್ನು ಬಂಡವಾಳಶಾಹಿ ಜಗತ್ತಿನ ತೀವ್ರ ಆರ್ಥಿಕ ಬಿಕ್ಕಟ್ಟನ್ನು ನಿವಾರಿಸಲು ವಿಶ್ವಬ್ಯಾಂಕ್, ಅಂತರ್ರಾಷ್ಟ್ರೀಯ ಹಣ ಕಾಸು ಸಂಸ್ಥೆ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ಒತ್ತಾಯಿಸುತ್ತಿವೆ. ಇಂತಹ ಮಾರ್ಗಗಳು ಕ್ರಮೇಣ ಆರ್ಥಿಕ ಯೋಜನೆಗೇ ವಿರಾಮ ಕೊಡುತ್ತವೆ. ವಿದೇಶಿ ಮತ್ತು ಸ್ವದೇಶಿ ಬಂಡವಾಳಕ್ಕೆ ಮುಕ್ತದ್ವಾರ ತೆರೆಯುತ್ತವೆ. ಆದುದರಿಂದ, ದೇಶದ ಸ್ವಾತಂತ್ರ್ಯ, ಸಾರ್ವಭೌಮತೆ, ಸ್ವಾವಲಂಬನೆಯನ್ನು ಉಳಿಸಿಕೊಳ್ಳಲು, ಸಾರ್ವಜನಿಕ ಕ್ಷೇತ್ರಕ್ಕೆ ಸಂಪನ್ಮೂಲ ಒದಗಿಸಲು ಪರ್ಯಾಯ ಮಾರ್ಗವನ್ನವಲಂಬಿಸಬೇಕಾಗಿದೆ. ಮುಖ್ಯವಾಗಿ :

1. ದೀರ್ಘ ಕಾಲದ ಅಥವಾ ಅಲ್ಪ ಕಾಲದ ಹಣಕಾಸು ಧೋರಣೆಯು ಆರ್ಥಿಕ ಅಭಿವೃದ್ಧಿ ಯೋಜನೆಗನುಗುಣವಾಗಿರಬೇಕು. ಸಂಪನ್ಮೂಲಗಳ ಅನಿಶ್ಚಿತೆಗಳನ್ನು ಹೋಗಲಾಡಿಸುವ ಪ್ರಬಲ ಅಸ್ತ್ರವಾಗಿರಬೇಕು.

2. ಯೋಜನಾ ವೆಚ್ಚಕ್ಕೆ ಸಂಪನ್ಮೂಲಗಳನ್ನು ಹೆಚ್ಚಾಗಿ ಆದಾಯ ಮತ್ತು ಆಸ್ತಿಗಳ ಮೇಲಿನ ಪ್ರತ್ಯಕ್ಷ ತೆರಿಗೆಗಳ ಮೂಲಕ ಪಡೆಯಬೇಕು. ಈ ದಿಸೆಯಲ್ಲಿ ಶ್ರೀಮಂತ ರೈತರ ಹಾಗೂ ಭೂಮಾಲಕರ ಕೃಷಿ ಮೂಲ ಆದಾಯ ಮತ್ತು ಆಸ್ತಿಗಳ ಮೇಲೆಯೂ ಪ್ರತ್ಯಕ್ಷ ತೆರಿಗೆ ವಿಧಿಸಬೇಕು. ಕಪ್ಪು ಹಣವನ್ನು ನಿರ್ದಾಕ್ಷಿಣ್ಯವಾಗಿ ಮುಟ್ಟುಗೋಲು ಹಾಕಬೇಕು. ತೆರಿಗೆ ತಪ್ಪಿಸುವವರಿಗೆ ಕಠಿಣ ಶಿಕ್ಷೆ ವಿಧಿಸಬೇಕು.

3. ಅಪ್ರತ್ಯಕ್ಷ ತೆರಿಗೆ, ಕೊರತೆ ಹಣ ಸೃಷ್ಟಿ, ಸಾರ್ವಜನಿಕ ಕ್ಷೇತ್ರದ ಉತ್ಪಾದನಾ ವಸ್ತುಗಳ ಬೆಲೆ ಏರಿಕೆ, ವಿದೇಶಿ ನೆರವು ಮಾರ್ಗಗಳನ್ನು ಕ್ರಮೇಣ ಕೈ ಬಿಡಬೇಕು.

4. ಸರಕಾರದ ಅನವಶ್ಯಕ ವೆಚ್ಚಗಳನ್ನು (ಉದಾಹರಣೆಗೆ ; ಏಷ್ಯಾಡ್) ತೀವ್ರವಾಗಿ ಕಡಿತಗೊಳಿಸಬೇಕು. ಸಾರ್ವಜನಿಕ ಕೈಗಾರಿಕೋದ್ಯಮಗಳ

ಆಡಳಿತದಲ್ಲಿ ಕಾರ್ಮಿಕರು ಸಕ್ರಿಯವಾಗಿ ಪಾತ್ರ ವಹಿಸಲು ಅವಕಾಶವಿರಬೇಕು. ಆಗ ಅವುಗಳ ದಕ್ಷತೆ ಹೆಚ್ಚಿನಷ್ಟು ನಿವಾರಣೆಯಾಗುವುದು, ಲಾಭಗಳಿಕೆ ಸಾಧ್ಯವಾಗುವುದು.

5. ಸರಕಾರದ ಸಂಗ್ರಹಾಲಯಗಳಲ್ಲಿ ಈಗ ಕೊಳೆತು ಹಾಳಾಗುತ್ತಿರುವ 30 ಮಿ. ಟನ್ ಆಹಾರ ಧಾನ್ಯಗಳ ಸ್ವಲ್ಪಾಂಶವನ್ನಾದರೂ "ಕೆಲಸಕ್ಕೆ ಕಾಳು" ಯೋಜನೆಗೆ ಸಂಪನ್ಮೂಲವಾಗಿ ಬಳಸಬೇಕು.

## ೨

# ಖಾಸಗೀ ರಂಗದ ಪರ ಹೊಸ ತಿರುವು

ಏಳನೇ ಪಂಚವಾರ್ಷಿಕ ಯೋಜನೆಯಲ್ಲಿ ಸಾರ್ವಜನಿಕ ಕ್ಷೇತ್ರದ ವೆಚ್ಚಕ್ಕೆ ವಿದೇಶಿ ನೆರವು, ರಫ್ತುಗಳಿಗೆ, ಸಾರ್ವಜನಿಕ ರಂಗದ ಲಾಭ, ಅಪ್ರತ್ಯಕ್ಷ ತೆರಿಗೆ ವಿಧಾನಗಳಿಂದ ಸಂಪನ್ಮೂಲ ಪಡೆಯುವುದು ಎಷ್ಟು ಅನಿಶ್ಚಿತ ಎಂದು ಹಿಂದಿನ ಲೇಖನದಲ್ಲಿ ನೋಡಿದೆವು. ಇದರಿಂದಾಗಿ ಅಂತಿಮವಾಗಿ ಯೋಜನಾ ವೆಚ್ಚಕ್ಕೆ ಕೊರತೆ ಹಣ ಸೃಷ್ಟಿಯ ವೈಜ್ಞಾನಿಕ ವಿಧಾನಕ್ಕೇ ಶರಣು ಹೋಗುವುದು ಅನಿವಾರ್ಯವಾಗಿ, ಯೋಜನಾ ವೆಚ್ಚ ಹೆಚ್ಚಾಗಿ, ಒಟ್ಟು ಮೊತ್ತದ ನಿಜ ಮೌಲ್ಯವು ಕಡಿಮೆಯಾಗಿ, ಯೋಜನೆಗೇ ವಿರಾಮ ನೀಡುವ ದುಃಸ್ಥಿತಿಯ ಕುರಿತು ಹಿಂದಿನ ಲೇಖನದಲ್ಲಿ ಚರ್ಚಿಸಲಾಗಿದೆ. ಸಂಪನ್ಮೂಲದ ಕೊರತೆಯಿಂದ ಏಳನೇ ಯೋಜನೆಯಲ್ಲಿ ವಾರ್ಷಿಕ ಯೋಜನಾ ವೆಚ್ಚವು 6ನೇ ಯೋಜನೆಯ ಕೊನೆಯ ವರ್ಷವಾದ 1984-85 ರ ವೆಚ್ಚಕ್ಕಿಂತ ಹೆಚ್ಚಾಗಲಾರದು ಎಂದು ಕಾ॥ ಕಾರ್ತಿಕ'ರಾಯ್ ತಮ್ಮ ಲೇಖನವೊಂದರಲ್ಲಿ ವಿಶ್ಲೇಷಿಸಿದ್ದಾರೆ (ಪಿ.ಡಿ. 3-11-85). ಇದೇ ಕಾರಣದಿಂದ, ಹೊಸ ಯೋಜನೆಯಲ್ಲಿ ಸಾರ್ವಜನಿಕ ರಂಗದ ಬದಲು ಖಾಸಗೀ ರಂಗಕ್ಕೆ ಹೆಚ್ಚು ಆದ್ಯತೆ ನೀಡುವ ಹೊಸ ತಿರುವನ್ನು ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

ಏಳನೇ ಯೋಜನೆಯ ಒಟ್ಟು ಮೊತ್ತ ರೂ. 3,48,148 ಕೋಟಿ. ಅದರಲ್ಲಿ ರೂ. 1,80000 ಕೋಟಿ ಸಾರ್ವಜನಿಕ ಕ್ಷೇತ್ರಕ್ಕೆ ಈ ಮೊತ್ತದಲ್ಲಿ ರೂ. 25,782 ಕೋಟಿ ಈಗಿರುವ ಅಭಿವೃದ್ಧಿ ಯೋಜನೆಗಳಿಗಾಗಿ

ಮೀಸಲು. ಸಾರ್ವಜನಿಕ ಕ್ಷೇತ್ರದಲ್ಲಿ ಹೊಸ ಬಂಡವಾಳ ಹೂಡುವಿಕೆ ರೂ. 1,54,218 ಕೋಟಿ, ಖಾಸಗೀ ಕ್ಷೇತ್ರದಲ್ಲಿ ರೂ. 1,68,148 ಕೋಟಿ. ಅಂದರೆ ಯೋಜನೆಯ ನಿವ್ವಳ ಮೊತ್ತ ರೂ. 3,22,366 ಕೋಟಿಯಲ್ಲಿ, ಸಾರ್ವಜನಿಕ ಕ್ಷೇತ್ರದ ಪಾಲು ಕೇವಲ ಶೇ. 47.8. ಖಾಸಗೀ ಕ್ಷೇತ್ರದ ಪಾಲು ಶೇ 52.2 ಯೋಜನೆ. ಪ್ರಾರಂಭವಾದಂದಿನಿಂದ ಲೆಕ್ಕಕ್ಕಾದರೂ ಸಾರ್ವಜನಿಕ ಕ್ಷೇತ್ರದಲ್ಲಿ ಖಾಸಗೀ ಕ್ಷೇತ್ರಕ್ಕಿಂತ ಹೆಚ್ಚು ಬಂಡವಾಳ ಹೂಡ ಲಾಗುತ್ತಿತ್ತು. ಆದರೆ, ಕಾಲಕ್ರಮೇಣ ಖಾಸಗೀ ಕ್ಷೇತ್ರದ ಪಾಲು ಹೆಚ್ಚುತ್ತಾ ಬಂದು ಏಳನೇ ಯೋಜನೆಯಲ್ಲಿ ಅರ್ಧಾಂಶಕ್ಕಿಂತಲೂ ಮೀರಿ ಮೊತ್ತ ಮೊದಲು ತನ್ನ ಮೇಲುಗೈ ಪಡೆಯಿತು !

ಸಾರ್ವಜನಿಕ ಕ್ಷೇತ್ರದ ಪಾಲು ಮೂರನೇ ಯೋಜನೆಯಿಂದ ಕಡಿಮೆ ಯಾಗುತ್ತಾ ಬಂದಿದೆ. 3 ನೇ ಯೋಜನೆ 63.7%, 4 ನೇ ಯೋಜನೆ 60.3%, 5ನೇ ಯೋಜನೆ 57.6%, 6 ನೇ ಯೋಜನೆ 52.9%, 7ನೇ ಯೋಜನೆ 47.8%. ಅಂದರೆ, ಮೊದಲನೆ ಸ್ಥಾನದಿಂದ ಮೊತ್ತ ಮೊದಲು ಎರಡನೇ ಸ್ಥಾನಕ್ಕೆ ಕುಸಿದಿದೆ ! ಇದುವರೆಗೆ ಸಾರ್ವಜನಿಕ ಕ್ಷೇತ್ರದ ಬೆಂಬಲ ದಿಂದ ಬೆಳೆದು ಬಂದ ಖಾಸಗಿ ಕ್ಷೇತ್ರ ಇಂದು ಸರಕಾರಕ್ಕೇ ಸವಾಲಾಗಿ ನಿಂತಿದೆ. ಆರ್ಥಿಕ ಅಭಿವೃದ್ಧಿಯಲ್ಲಿ ತನ್ನ ಮೇಲುಗೈ ಸಾಧಿಸಿದೆ !

ಅಲ್ಪ ಪ್ರಮಾಣದ ಸಾರ್ವಜನಿಕ ಕ್ಷೇತ್ರದಲ್ಲಿಯೂ, ಹೊಸ ಯೋಜನೆ ಯಲ್ಲಿ ಕೇಂದ್ರದ ಪಾಲು ರೂ. 95534 ಕೋಟಿ ಶೇ–53. ರಾಜ್ಯಗಳ ಪಾಲು ರೂ. 84466 ಕೋಟಿ, ಶೇ. 47. ಆರನೇ ಯೋಜನೆಯಲ್ಲಿ ಕೇಂದ್ರ ಮತ್ತು ರಾಜ್ಯಗಳ ಪಾಲು ಅನುಕ್ರಮವಾಗಿ 48.46 ಮತ್ತು ಶೇ 51.54 ಆಗಿತ್ತು. ಸಾರ್ವಜನಿಕ ಕ್ಷೇತ್ರದಲ್ಲಿ ಅತಿಕೇಂದ್ರೀಕರಣ, ಖಾಸಗೀ ಕ್ಷೇತ್ರದಲ್ಲಿ ಲೈಸೆನ್ಸ್ ನಿಯಂತ್ರಣಗಳ ಸಡಿಲು ಧೋರಣೆ ಎಂತಹ ವಿಪರ್ಯಾಸ! ಇದನ್ನು ಯಾರಾ ದರೂ ಯೋಜನೆ ಎನ್ನಬಹುದೇ ? ಈ ಯೋಜನಾರಹಿತ ಯೋಜನೆಯಲ್ಲಿ

ಬಂಡವಾಳಶಾಹಿ ಪರವಾಗಿ ಖಾಸಗೀ ರಂಗದ ಪರವಾಗಿ ಹೊಸ ತಿರುವು ಕೊಟ್ಟಿರುವುದನ್ನು ಅನೇಕ ಗಣ್ಯರ ಹೇಳಿಕೆಗಳಿಂದ ಗುರುತಿಸಬಹುದು. ಉದಾಹರಣೆಗೆ:—

ಇ. ಎಂ. ಎಸ್. ನಂಬೂದರಿಪಾಡ್–

ಪ್ರಧಾನ ಕಾರ್ಯದರ್ಶಿ ಸಿಪಿಐ(ಎಂ): "ಉತ್ಪಾದನೆಯ ಘಟಕಗಳನ್ನು ಎಲ್ಲಿ ಸ್ಥಾಪಿಸಬೇಕು ಯಾವ ಸಾಮಗ್ರಿಗಳನ್ನು ಉತ್ಪಾದಿಸಬೇಕು, ಅವುಗಳನ್ನು ಎಷ್ಟು ಬೆಲೆಗೆ ಮಾರಬೇಕು, ಇತ್ಯಾದಿ ವಿಷಯಗಳನ್ನು ಮುಂದಿನ ವರ್ಷಗಳಲ್ಲಿ ಖಾಸಗೀ ರಂಗದ ಒಡೆಯರೇ ಹೆಚ್ಚಾಗಿ ನಿರ್ಧರಿಸುವರು. ಆಗ ಯೋಜನೆಗೆ ಪೂರ್ಣ ವಿರಾಮ ಹಾಕಿದಂತೆಯೇ ಸರಿ' (ಪಿ.ಡಿ.29–9–85)

ಜ್ಯೋತಿಬಸು -

ಮುಖ್ಯಮಂತ್ರಿ, ಪ. ಬಂಗಾಳ : "ಮೂವತ್ತೈದು ವರ್ಷಗಳ ಆರ್ಥಿಕ ಯೋಜನೆಯ ಪ್ರತಿಫಲ ಕುಸಿಯುತ್ತಿರುವ ರಾಷ್ಟ್ರೀಯ ಸರಾಸರಿ ಉತ್ಪಾದನೆ, ಆದಾಯ ಮತ್ತು ಜೀವನಾವಶ್ಯಕ ವಸ್ತುಗಳ ಬಳಕೆ, ಹೆಚ್ಚುತ್ತಿರುವ ನಿರುದ್ಯೋಗ ಮತ್ತು ಬಡತನ. ಆದರೆ ಪರಿಹಾರ : ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳು ನಿರ್ದೇಶಿಸಿದ ರಫ್ತು ಆಧರಿತ ಆರ್ಥಿಕ ಅಭಿವೃದ್ಧಿ, ಉದಾರ ಆಮದು ನೀತಿ, ಭೋಗ ವಸ್ತುಗಳ ಆಧಾರದಲ್ಲಿ ಆಂತರಿಕ ಮಾರುಕಟ್ಟೆಯ ವಿಸ್ತರಣೆ ಮತ್ತು ಖಾಸಗೀ ರಂಗದ ಮೇಲಿನ ಸಡಿಲು ನಿಯಂತ್ರಣ".

(ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಭಾಷಣ, ಪಿ. ಡಿ. 17–11–85)

ನೃಪೇನ್ ಚಕ್ರವರ್ತಿ–

ಮುಖ್ಯಮಂತ್ರಿ ತ್ರಿಪುರಾ : "ಬಡವರ ಮತ್ತು ಶ್ರೀಮಂತರ ಮಧ್ಯೆ ಅಗಾಧ ಅಂತರದ ಕುರಿತು ಏಳನೇ ಯೋಜನೆ ಮೌನವಾಗಿದೆ. ಹಿಂದೆ ಮಹಲ

ನೋಬೀಸ್ ಸಮಿತಿ ನೂರು ಗುತ್ತೇದಾರಿ ಕುಟುಂಬಗಳನ್ನು ಗುರುತಿಸಿ, ದೇಶದ ಹೆಚ್ಚಿನ ಸಂಪತ್ತನ್ನು ಕಬಳಿಸುತ್ತಿರುವ ಬಗ್ಗೆ ಎಚ್ಚರಿಸಿತ್ತು. ಆದರೆ, ಇಂದು ಏಳನೇ ಯೋಜನೆಯಲ್ಲಿ ಈ ಕೊಬ್ಬಿದ ಕುಟುಂಬಗಳಿಗೇ ಹೆಚ್ಚು ಲಾಭ ಗಳಿಸಲು ಪ್ರೋತ್ಸಾಹಿಸಲಾಗಿದೆ ! (ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಭಾಷಣ : ಪಿ. ಡಿ. 17-11-85)

ರಾಮಕೃಷ್ಣ ಹೆಗಡೆ-

"6 ಯೋಜನೆಯು "ಬಡವರ" ಮತ್ತು "ಶ್ರೀಮಂತರ" ಎರಡು ಭಾರತಗಳನ್ನು ಬಳುವಳಿಯಾಗಿ ಬಿಟ್ಟು ಹೋಗಿದೆ. ಇವುಗಳ ಮೇಲೆಯೇ 21 ನೇ ಶತಮಾನಕ್ಕೆ ನೆಗೆಯುವ ಹೈ ಟೆಕ್ನಾಲಜಿ ಆರ್ಥಿಕ ಅಭಿವೃದ್ಧಿಯ ಮಾರ್ಗ ಅರ್ಥ ಹೀನ. ಯೋಜನೆಯು ಮುಂದಿನ ನೂರು ಕೋಟಿ ಜನಸಮುದಾಯದ ಪರವಾಗಿದ್ದು ಬಡತನ, ನಿರುದ್ಯೋಗ, ನಿರಕ್ಷರತೆಗಳನ್ನು ಹೋಗಲಾಡಿಸಲು ಒತ್ತು ನೀಡಬೇಕು. ಈ ದಿಸೆಯಲ್ಲಿ ಕರ್ನಾಟಕದಲ್ಲಿ ವಿಜಯನಗರ ಉಕ್ಕು ಸ್ಥಾವರ, ತೈಲ ಶುದ್ಧೀಕರಣ, ಇತ್ಯಾದಿ ಭಾರಿ ಉದ್ಯಮಗಳನ್ನು ಸ್ಥಾಪಿಸಬೇಕು" (ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಭಾಷಣ : ಇಂಡಿಯನ್ ಎಕ್ಸ್‌ಪ್ರೆಸ್ 9-11-85)

ವಿ. ಎಂ. ತಾರ್ಕುಂಡೆ-

ಪ್ರಜಾಪ್ರಭುತ್ವಕ್ಕಾಗಿ ನಾಗರಿಕ ವೇದಿಕೆಯ ಮುಖ್ಯಸ್ಥ :

"ರಾಜೀವಗಾಂಧಿಯ ಹೊಸ ಆರ್ಥಿಕ ಧೋರಣೆಯು ಬಂಡವಾಳಶಾಹಿ ಪರವಾಗಿದೆ. ಆದರಿಂದ ದೇಶದ ಶೇ 85 ರಷ್ಟು ಜನರಿಗೆ ಪ್ರಯೋಜನವಾಗಲಾರದು. ದೀರ್ಘಕಾಲದ ದೃಷ್ಟಿಯಿಂದ ಹೇಳುವುದಾದರೆ, ಸದ್ಯದಲ್ಲಿಯೇ ಸರಕಾರ ಬಡತನವನ್ನು ಗಮನಿಸುವ ತಮ್ಮ ಆರ್ಥಿಕ ನೀತಿಯನ್ನು ಬದಲಾಯಿಸಬೇಕಾದೀತು. ಅಥವಾ, ಬಡವರನ್ನು ನಿಯಂತ್ರಿಸಲು ಸರಕಾರವೇ ಸರ್ವಾಧಿಕಾರಕ್ಕೆ ಪರಿವರ್ತನೆಗೊಳ್ಳಬೇಕಾದೀತು.

(ಸಂಡೆ ಅಬ್ಸರ್‌ವರ್ ಸಂದರ್ಶನ : 10-11-85)

**ನೃಪೇನ್ ಬಂದೋಪಾಧ್ಯಾಯ :**

ಸಮಾಜ ವಿಜ್ಞಾನಿಗಳ ಅಧ್ಯಯನ ಕೇಂದ್ರ, ಕಲ್ಕತ್ತ : "ನೆಹರು ಮಹಲ ನೋಬೀಸ್ ಕಾಲದ ಯೋಜನೆಯು ಪ್ರಾರಂಭದ ವರ್ಷಗಳಲ್ಲಿ ಕೃಷಿ ಪ್ರಧಾನವಾದ ಭಾರತದ ಆರ್ಥಿಕ ವ್ಯವಸ್ಥೆಯ ಮೇಲೆ ಸಾರ್ವಜನಿಕ ಕ್ಷೇತ್ರದ ಆಶ್ರಯದಲ್ಲಿ ಬೃಹತ್ ಉದ್ಯಮಗಳ ಸೌಧವೇರಿಸುವ "ವರ್ಗ ಹೋರಾಟ ರಹಿತ' ಮಿಶ್ರ ಆರ್ಥಿಕ ನೀತಿಯ ಸಮಾಜವಾದಿ ಮಾದರಿ ಸಮಾಜ ಸ್ಥಾಪಿಸುವ ಗುರಿಯಾಗಿತ್ತು.

ಆದರೆ, ಕಾಲಕ್ರಮೇಣ ಆಚರಣೆಯಲ್ಲಿ ಸ್ವಾತಂತ್ರ್ಯಪೂರ್ವದ ಖಾಸಗೀ ರಂಗ ಪ್ರಧಾನವಾದ, ಸಾರ್ವಜನಿಕ ರಂಗ ಮತ್ತು ಅದಕ್ಕೆ ಪೂರಕವಾದ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ದೇಶದ ಗುತ್ತೇದಾರಿ ಬಂಡವಾಳ ಶಾಹಿ ಗಳು ರಚಿಸಿದ "ಮುಂಬೈ ಯೋಜನೆಯ" ಬಂಡವಾಳಶಾಹಿ ಮಾರ್ಗದಲ್ಲಿಯೇ ದೇಶದ ಆರ್ಥಿಕ ಅಭಿವೃದ್ಧಿ ಮುಂದುವರಿದು, ಸಮಾಜವಾದದಿಂದ ಬಹಳ ದೂರ ಸರಿಯಿತು. ಬಡವರ ಶೋಷಣೆಯಿಂದ, ಸರಕಾರದ ಸಹಾಯದಿಂದ ಬೆಳೆದುಬಂದ ಖಾಸಗೀರಂಗ ಇಂದು ಸರಕಾರಕ್ಕೇ ಸವಾಲಾಗಿ ತನ್ನ ಮೇಲುಗೈ ಸಾಧಿಸುತ್ತಿದೆ. [ಮಾಸ್ಕೋ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ, ಇಂಡಿಯನ್ ಎಕ್ಸ್‌ಪ್ರೆಸ್ : 24-11-85]

**ತೆರಿಗೆ ರಿಯಾಯಿತಿ ಲೈಸನ್ಸ್ ರದ್ದತಿ :**

ಏಳನೇ ಯೋಜನೆಯ ಮೊದಲ ವರ್ಷದ ಪ್ರಾರಂಭದಿಂದಲೇ ಖಾಸಗೀ ರಂಗದ, ಮುಖ್ಯವಾಗಿ ಗುತ್ತೇದಾರಿ ಕೈಗಾರಿಕೋದ್ಯಮಗಳಿಗೆ ವಿಶೇಷ ಸಹಾಯ ಸೌಲಭ್ಯಗಳನ್ನು ಘೋಷಿಸಲಾಯಿತು. ಕಂಪನಿಗಳ ಆದಾಯ ತೆರಿಗೆ ಯಲ್ಲಿ ಗಣನೀಯ ಕಡಿತವಾಯಿತು. ಇದುತನಕ ರೂ. 20 ಕೋಟಿಗಿಂತ ಹೆಚ್ಚು ಆಸ್ತಿ ಮೌಲ್ಯ ಇರುವ ಕೈಗಾರಿಕಾ ಸಂಸ್ಥೆಗಳನ್ನು ಏಕಸ್ವಾಮ್ಯ (MRTP) ನಿಯಂತ್ರಣಾ ಕಾಯಿದೆಗೆ ಒಳಪಡಿಸಲಾಗಿತ್ತು. ಹೊಸ ಧೋರಣೆಯಲ್ಲಿ ರೂ.

100 ಕೋಟಿಗೂ ಹೆಚ್ಚಿನ ಆಸ್ತಿಮೌಲ್ಯವಿರುವ ಕೈಗಾರಿಕಾ ಸಂಸ್ಥೆಗಳನ್ನು ಮಾತ್ರ ಏಕಸಾಮ್ಯ ಎಂದು ಗುರುತಿಸಲಾಗುವುದು. ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಇದುವರೆಗೆ ಮೀಸಲಾಗಿರುವ ಅನೇಕ ಕ್ಷೇತ್ರಗಳನ್ನು ಈಗ ಬೃಹತ್ ಖಾಸಗೀ ಉದ್ಯಮರಂಗಕ್ಕೆ ತೆರೆದಿಡಲಾಗಿದೆ. 22 ಕೈಗಾರಿಕೆಗಳಿಗೆ ಲೈಸೆನ್ಸ್ ಪದ್ಧತಿಯನ್ನು ರದ್ದುಗೊಳಿಸಲಾಗಿದೆ. ಏಕಸಾಮ್ಯ ಸಂಸ್ಥೆಗಳಿಗೆ ಧನ ಸಹಾಯ, ವಿದೇಶೀ ವಿನಿಮಯ ನೆರವು, ಹಾಗೂ ಸಹಭಾಗ, ಆಮದು ಸೌಲಭ್ಯ, ರಫ್ತು ಪ್ರೋತ್ಸಾಹ, ಅತ್ಯಾಧುನಿಕ ತಾಂತ್ರಿಕ ನೆರವು, ಇತ್ಯಾದಿಗಳನ್ನು ಆದ್ಯತೆಯಿಂದ ಉದಾರವಾಗಿ ಒದಗಿಸಲು ನಿರ್ಧರಿಸಲಾಗಿದೆ.

ಖಾಸಗೀ ರಂಗದ ಪರವಾಗಿ ಉದಾರ ನೀತಿ ನಿರಂತರವಾಗಿ ಮುಂದುವರಿಯುತ್ತಿದೆ. ದೀರ್ಘಕಾಲದ ಹಣಕಾಸು ನೀತಿಯ ನೆಪದಲ್ಲಿ ಇತ್ತೀಚೆಗೆ ವಿತ್ತಮಂತ್ರಿ ವಿ. ಪಿ. ಸಿಂಘ್‌ರ ಘೋಷಣೆಯಂತೆ, ಖಾಸಗೀ ರಂಗದ ಕೈಗಾರಿಕಾ ಸಂಸ್ಥೆಗಳ ಆದಾಯದ ಮೇಲೆ ಮುಂದಿನ 5 ವರ್ಷಗಳಲ್ಲಿ ತೆರಿಗೆ ಹೆಚ್ಚಿಸಲಾಗುವುದಿಲ್ಲ. ಅವುಗಳು ಬೇಕಾದಷ್ಟು ಲಾಭಗಳಿಸಬಹುದು. ಲಾಭಗಳಿಕೆಯ ಹೆಚ್ಚಿನ ಪಾಲನ್ನು ಹೊಸ ಬಂಡವಾಳ ಹೂಡುವಿಕೆಯಲ್ಲಿ ತೊಡಗಿಸುವುದು ಎಂಬ ಆಶಯ ಇದುವರೆಗೆ ಲಾಭಗಳಿಕೆಯ ಬಹುಪಾಲು ಕಪ್ಪು ಹಣವಾಗಿ ಕಳ್ಳಸಂತೆಯಲ್ಲಿ ಹರಿದುಹೋಗುವ ಮಾರುಕಟ್ಟೆಯ ಪೈಪೋಟಿಯಲ್ಲಿ ಏಕಸ್ವಾಮ್ಯ ಸ್ಥಾಪಿಸುವ ಭೋಗ ಜೀವನಕ್ಕೆ, ರಾಜಕೀಯ ವರ್ಚಸ್ಸಿಗೆ ಬಳಸುವ ಅನುಭವಗಳೇ ಹೆಚ್ಚು. ಈ ಸಂಸ್ಕೃತಿ ಬದಲಾದೀತೆ ?

ಡಿಸೆಂಬರ್ 25 ರಂದು, ಕ್ರಿಸ್‌ಮಸ್ ಕೊಡುಗೆಯಾಗಿ, ಖಾಸಗಿ ರಂಗದ ಬೃಹತ್ ಸಂಸ್ಥೆಗಳಿಗೆ ಇನ್ನಷ್ಟು ರಿಯಾಯಿತಿಗಳನ್ನು ಘೋಷಿಸಲಾಗಿದೆ. "ಏಕಸ್ವಾಮ್ಯ ಮತ್ತು ವಿದೇಶಿ ವಿನಿಮಯ ಕಾಯಿದೆಗಳಿಗೆ" (MRTP & FERA) ಒಳಪಟ್ಟ ಬೃಹತ್ ಸಂಸ್ಥೆಗಳಿಗೆ 17 ಕೈಗಾರಿಕೆಗಳನ್ನು ತೆರೆದಿಡಲಾಯಿತು. ಇದುವರೆಗೆ ಈ ಕೈಗಾರಿಕೆಗಳು ಹೆಚ್ಚಾಗಿ ಸಣ್ಣ ಮತ್ತು ಮಧ್ಯಮ ಘಟಕಗಳಿಗೆ ಮೀಸಲಾಗಿದ್ದವು. ಈಗ ರೂ. 100

ಕೋಟಿಗೂ ಹೆಚ್ಚು ಆಸ್ತಿಮೌಲ್ಯವಿರುವ ಬೃಹತ್ ಏಕಸ್ವಾಮ್ಯ ಕೈಗಾರಿಕೆಗಳೂ ಈ ಕ್ಷೇತ್ರಗಳಲ್ಲಿ ಪ್ರವೇಶಿಸಬಹುದು. ಈ ವರ್ಷದ ಪ್ರಾರಂಭದಲ್ಲಿ ಲೈಸೆನ್ಸ್ ಪದ್ಧತಿ ರದ್ದುಗೊಳಿಸಿದ 22 ಕೈಗಾರಿಕೆಗಳಲ್ಲಿ, ಇನ್ನು ಮುಂದೆ ಈ ಬೃಹತ್ ಸಂಸ್ಥೆಗಳೂ ಅನಿರ್ಬಂಧಿತ ಮೊತ್ತದ ಬಂಡವಾಳ ಹೂಡಬಹುದು. ಲೈಸೆನ್ಸ್ ಮತ್ತು ಬಂಡವಾಳ ಹೂಡುವಿಕೆಯು ನಿಯಂತ್ರಣಗಳಿಗೆ ಒಳಗಾದ ಕೈಗಾರಿಕೆಗಳಲ್ಲಿಯೂ, ಅಕ್ರಮವಾಗಿ ಹೆಚ್ಚಿಸಿದ ಉತ್ಪಾದನಾ ಸಾಮರ್ಥ್ಯದ ಅರ್ಧಾಂಶದ ವರೆಗೆ ಹೆಚ್ಚಿನ ಸದ್ದುಗದ್ದಲವಿಲ್ಲದೆ ಸರಕಾರ ಸಿಂಧುಗೊಳಿಸುವುದು. ನವೀಕರಣ, ಆಧುನೀಕರಣ, ಯಂತ್ರೋಪಕರಣಗಳ ಬದಲಾವಣೆ, ಇತ್ಯಾದಿ ಕಾರಣಗಳನ್ನು ಮುಂದೊಡ್ಡಿದರಾಯಿತು. ಅಕ್ರಮವಾಗಿ ಹೆಚ್ಚಿಸಿದ ಉತ್ಪಾದನಾ ಸಾಮರ್ಥ್ಯವನ್ನು ಸಿಂಧುಗೊಳಿಸುವ ಅವಕಾಶ ಬೃಹತ್ ಸಂಸ್ಥೆಗಳಿಗೂ ತೆರೆದಿದೆ. "ಅವುಗಳು ಮುಕ್ತವಾಗಿಟ್ಟ ಕೈಗಾರಿಕೆಗಳನ್ನು ಹಿಂದುಳಿದ ಪ್ರದೇಶಗಳಲ್ಲಿ ಸ್ಥಾಪಿಸಿದರೆ, ಈ ರಿಯಾಯಿತಿ ಸಿಗುವುದು. ರಫ್ತು ಪ್ರೋತ್ಸಾಹಕ್ಕೆಂದು ಪ್ರಾರಂಭಗೊಂಡ ಈ ರಿಯಾಯಿತಿಯನ್ನು ರಫ್ತು ಶರತ್ತನ್ನು ಸಡಿಲಗೊಳಿಸಿಯೂ ಮುಂದುವರಿಸಲಾಗಿದೆ !

**ಯೋಜನೆ ಎಲ್ಲಿದೆ ?**

ಈಗಾಗಲೇ ವಿವಿಧ ಕೈಗಾರಿಕೆಗಳಲ್ಲಿ 80000ಕ್ಕೂ ಹೆಚ್ಚಿನ ಘಟಕಗಳು (ಮುಖ್ಯವಾಗಿ ಸಣ್ಣ ಮಧ್ಯಮ) ನಷ್ಟದ ದಾರಿಯಲ್ಲಿದ್ದು. ಲಕ್ಷಾಂತರ ಕಾರ್ಮಿಕರು ನಿರುದ್ಯೋಗಿಗಳಾಗುತ್ತಿದ್ದಾರೆ. ಏಳನೇ ಯೋಜನೆಯು ಈ ಕುರಿತು ಹೆಚ್ಚು ಕಾಳಜಿ ಹೊಂದಿರುವಂತೆ ಕಂಡು ಬರುವುದಿಲ್ಲ. ಆರ್ಥಿಕ ಅಭಿವೃದ್ಧಿಗೆ, ಕೈಗಾರಿಕಾ ಉತ್ಪಾದನೆ ಶೀಘ್ರದಲ್ಲಿ ಹೆಚ್ಚಾಗಬೇಕು ಎಂಬುದೊಂದೇ ಅದರ ಗುರಿ. ಅದಕ್ಕೆ ಸಾರ್ವಜನಿಕ ರಂಗವನ್ನು ಹೆಚ್ಚು ಅವಲಂಬಿಸಲು ಸಂಪನ್ಮೂಲದ ಕೊರತೆ, ಆಡಳಿತದ ಅಧ್ಯಕ್ಷತೆ ಮತ್ತು ನಷ್ಟದ ನೆಪಗಳು, ಹೈಟೆಕ್ನಾಲಜಿ, ಆಧುನಿಕಣ, ರಫ್ತು, ಹಿಂದಳಿದ ಪ್ರದೇಶಗಳ ಅಭಿವೃದ್ಧಿ, ಇತ್ಯಾದಿ ಕಾರಣಗಳನ್ನು ಮುಂದೊಡ್ಡಿ, ಏಕ ಸ್ವಾಮ್ಯ ಸಂಸ್ಥೆಗಳಿಗೆ ಅನಿರ್ಬಂಧಿತ ಪ್ರೋತ್ಸಾಹಗಳು, ರಿಯಾಯಿತಿಗಳು ಯೋಜನೆಯ ಹೊಸಬಂಡವಾಳಹೂಡುವಿಕೆ

ಯಲ್ಲಿ ಶೇ 50ಕ್ಕೂ ಹೆಚ್ಚಿನ ಪಾಲು ಪಡೆದಿರುವ ಖಾಸಗೀ ರಂಗ ಎಲ್ಲಾ ಕೈಗಾರಿಕೆಗಳನ್ನು ಸ್ಥಾಪಿಸಬೇಕು, ಎಷ್ಟು ಬಂಡವಾಳ ಹೂಡಬೇಕು, ಏನು ಉತ್ಪಾದಿಸಬೇಕು, ಎಷ್ಟು ಉತ್ಪಾದಿಸಬೇಕು, ಯಾರಿಗೆ ಮಾರಾಟ ಮಾಡಬೇಕು, ಎಷ್ಟು ಬೆಲೆಗೆ ಮಾರಬೇಕು, ಯಾವ ತಾಂತ್ರಿಕತೆ ಬಳಸಬೇಕು, ಎಷ್ಟು ವಿದೇಶಿ ವಿನಿಮಯಗಳಿಸಬೇಕು ಅಥವಾ ಬಳಸಬೇಕು, ಇತ್ಯಾದಿ ವಿಷಯಗಳಲ್ಲಿ ಯೋಜನಾ ಆಯೋಗ "ಏಕಸ್ವಾಮ್ಯ" ಮತ್ತು "ವಿದೇಶಿ ವಿನಿಮಯ ನಿಯಂತ್ರಣ" ಕಾಯಿದೆಗಳು, ಸರಕಾರ ಹಸ್ತಕ್ಷೇಪ ಮಾಡುವಂತಿಲ್ಲ. ಹಾಗಾದರೆ, ಯೋಜನೆ ಎಲ್ಲಿದೆ ?

1966-67 ರಿಂದ 1968-69 ರ ವರೆಗೆ ಮೂರು ವರ್ಷಗಳ ಅವಧಿಯಲ್ಲಿ ಯುದ್ಧ, ಬರಗಾಲ ಕಾರಣಗಳಿಂದ ಯೋಜನೆಗೆ ಅಧಿಕೃತವಾಗಿ ರಜೆ ಸಾರಬೇಕಾಗಿತ್ತು. ಆದರೆ ಮುಂದಿನ 5 ವರ್ಷಗಳಲ್ಲಿ(1985-90)ಖಾಸಗೀ ರಂಗದ ಮೇಲುಗೈ ಹೊಂದಿದ ಯೋಜನೆಯಲ್ಲಿ ಅನಧಿಕೃತವಾಗಿ ನಿಜವಾದ ಯೋಜನೆಗೆ ರಜೆ, ಸಾರಿರುವುದನ್ನು ಮುಖ್ಯವಾಗಿ ಗಮನಿಸಬೇಕು

ಸಂಪನ್ಮೂಲ ಕೊರತೆಯಿಂದಾಗಿ ಸಾರ್ವಜನಿಕ ರಂಗವು, ಯೋಜನೆಯ ಅವಧಿಯಲ್ಲಿ ಇದುವರೆಗಿನ ಅಭಿವೃದ್ಧಿ ಕಾರ್ಯಗಳನ್ನು ಮುಕ್ತಾಯಗೊಳಿಸುವುದಕ್ಕೇ ಹೆಚ್ಚು ಆದ್ಯತೆನೀಡಲಿದೆ, ಪರಿಣಾಮವಾಗಿ, ವಿದ್ಯುತ್, ಉಕ್ಕು, ತೈಲ, ಕಲ್ಲಿದ್ದಲು,ಗೊಬ್ಬರ,ರೈಲ್ವೆ, ರಸ್ತೆ, ಶಿಕ್ಷಣ, ಆರೋಗ್ಯ,ವಸತಿ, ಅಗತ್ಯಕ್ಷೇತ್ರಗಳಲ್ಲಿ ಹೊಸಅಭಿವೃದ್ಧಿ ಕಾರ್ಯಗಳನ್ನುಪ್ರಾರಂಭಿಸಲುಅಸಾಧ್ಯ.ಇದುವರೆಗಿನಅನುಭವದಲ್ಲಿ ಸಾರ್ವಜನಿಕ ರಂಗದಲ್ಲಿ ಅಭಿವೃದ್ಧಿಕಾರ್ಯಗಳು ಸ್ಥಗಿತಗೊಂಡಂತೆ, ಅದೇ ಪ್ರಮಾಣದಲ್ಲಿ ಖಾಸಗೀ ರಂಗದ ಅಭಿವೃದ್ಧಿ ಕಾರ್ಯಕ್ರಮಗಳೂ ಕುಂಠಿತವಾಗುವುವು.ಮುಂದುವರಿದ ಬಂಡವಾಳಶಾಹಿ ರಾಷ್ಟ್ರಗಳಲ್ಲಿಯೂ ಖಾಸಗೀ ರಂಗದ ಹಿತದೃಷ್ಟಿಯಿಂದಲೇ ಸಾರ್ವಜನಿಕ ರಂಗದಲ್ಲಿ ಹೆಚ್ಚು ಹೆಚ್ಚು ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ ಆದರೆ, ಅತ್ಯಂತ ಬಡ ದೇಶವಾದ ಭಾರತದಲ್ಲಿ 21ನೇ ಶತಮಾನಕ್ಕೆ ನೆಗೆಯಲು 19ನೇ ಶತಮಾನದ "ಫ್ರೀ ಎಂಟರ್ ಪ್ರೈಸ್" [Free Enterprice) ಅನಿಯಂತ್ರಿತ ಖಾಸಗೀ ರಂಗದ ಮೇಲುಗೈಯ ಬಂಡವಾಳಶಾಹಿ ಪದ್ಧತಿಯನ್ನನುಸರಿಸಲಾಗುತ್ತಿದೆ !

೬

# ಉತ್ಪಾದನೆ ಮತ್ತು ಉದ್ಯೋಗ ಹೆಚ್ಚಳ ಸಾಧ್ಯವೇ ?

ಹಿಂದಿನ ಮೂರು ಲೇಖನಗಳಲ್ಲಿ ಏಳನೇ ಯೋಜನೆಯ ಅವಧಿಯಲ್ಲಿ ಯೋಜನೆಯ ಗೌಣಸ್ಥಾನ, ಸಾರ್ವಜನಿಕ ರಂಗದ ಅಭಿವೃದ್ಧಿಗೆ ಸಂಪನ್ಮೂಲದ ತೀವ್ರ ಕೊರತೆ ಮತ್ತು ಆರ್ಥಿಕ ಅಭಿವೃದ್ಧಿಗೆ ಖಾಸಗೀ ರಂಗದವರ ಹೊಸ ತಿರುವಿನ ಕುರಿತು ವಿಶ್ಲೇಷಿಸಲಾಗಿದೆ. ಏಳನೇ ಯೋಜನೆಯಲ್ಲಿ ನಿರೀಕ್ಷಿಸಿದ ಉತ್ಪಾದನೆ ಮತ್ತು ಉದ್ಯೋಗ ಹೆಚ್ಚಳ ಸಾಧ್ಯವೇ ಎಂದು ಪರಿಶೀಲಿಸಲಾಗುವುದು.

ಆರ್ಥಿಕ ಅಭಿವೃದ್ಧಿಯ ಅಂತಿಮ ಗುರಿ ಜನರ ಜೀವನ ಮಟ್ಟವನ್ನು ಹೆಚ್ಚಿಸುವುದು. ಆಹಾರ, ಬಟ್ಟೆ, ವಸತಿ, ಶಿಕ್ಷಣ, ಆರೋಗ್ಯ, ಇತ್ಯಾದಿ ಜೀವನಾವಶ್ಯಕತೆಗಳನ್ನು ಹೆಚ್ಚು ಒದಗಿಸುವುದು. ಜೀವನ ಮಟ್ಟ ಹೆಚ್ಚಿಸಲು ಜನರ ಆದಾಯ ಹೆಚ್ಚಾಗಬೇಕು. ಆದಕ್ಕಾಗಿ ಉದ್ಯೋಗವಕಾಶ ಹೆಚ್ಚಾಗಲು ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಉತ್ಪಾದನೆ ಹೆಚ್ಚಾಗಬೇಕು. ಉತ್ಪಾದನಾ ಹೆಚ್ಚಳವು ಮಾರುಕಟ್ಟೆಯನ್ನು, ಜನರ ಗ್ರಾಹಕ ಶಕ್ತಿಯನ್ನು ಅವಲಂಬಿಸಿರುವುದು. ಗ್ರಾಹಕ ಶಕ್ತಿಯು ಪುನಃ ಹೆಚ್ಚಿನ ಆದಾಯ ಹಾಗೂ ಉದ್ಯೋಗಾವಕಾಶವನ್ನು ಆಧರಿಸಿದೆ. ಆದುದರಿಂದ, ಉತ್ಪಾದನೆ ಮತ್ತು ಉದ್ಯೋಗ ಆರ್ಥಿಕ ಅಭಿವೃದ್ಧಿಯ ಒಂದೇ ನಾಣ್ಯದ ಎರಡು ಮುಖಗಳು.

ಏಳನೇ ಯೋಜನೆಯಲ್ಲಿ ಆರ್ಥಿಕ ಅಭಿವೃದ್ಧಿಯ ದರ ಶೇ. 5 ರಷ್ಟು ಎಂದೂ, ಕೈಗಾರಿಕೆಯ ಅಭಿವೃದ್ಧಿ ದರ ಶೇ.8 ರಷ್ಟು ಎಂದೂ ಕೃಷಿ ಅಭಿವೃದ್ಧಿ

ದರ ಶೇ. 4 ರಷ್ಟು ಎಂದೂನಿ ಗದಿಮಾಡಲಾಗಿದೆ. ಆದರೆ, ಆರನೇ ಯೋಜನೆ ಯಲ್ಲಿಯೂ ಹೆಚ್ಚು ಕಡಿಮೆ ಇದೇ ದರಗಳಲ್ಲಿ ಅಭಿವೃದ್ಧಿಯನ್ನು ನಿರೀಕ್ಷಿಸಲಾಗಿದ್ದರೂ, ಯೋಜನೆಯ ಅಂತ್ಯದಲ್ಲಿ ಅಭಿವೃದ್ಧಿ ದರಗಳು ಬಹಳ ಕೆಳಮಟ್ಟದಲ್ಲಿದ್ದವು. ಆದರೂ ಅಭಿವೃದ್ಧಿದರಗಳ ಹೆಚ್ಚಳವನ್ನು ಪ್ರಾರಂಭದ ವರ್ಷವಾದ 1980–81ಕ್ಕೆ ಹೊಲಿಸಿ ನೋಡಿದರೆ, ಕೃಷಿ ಉತ್ಪಾದನೆ ಅತ್ಯಂತ ಕನಿಷ್ಟವಾಗಿದ್ದ 1979–80ಕ್ಕೆ ಹೋಲಿಸಿ ಹೆಚ್ಚಿನ ದರಗಳಲ್ಲಿ ಅಭಿವೃದ್ಧಿ ಸಾಧಿಸಲಾಗಿದೆ ಎಂದೂ ಹೋಗಳಿಕೊಳ್ಳಲಾಗಿದೆ ! ಇದು ಅಧಿಕಾರಿ ವರ್ಗದ ಅಂಕೆ ಸಂಖ್ಯೆಗಳ ಮೇಲಿನ ಕಸರತ್ತು ಅಷ್ಟೇ !

ಆರನೇ ಯೋಜನೆಯಲ್ಲಿ ಅಭಿವೃದ್ಧಿ ದರಗಳು ಕೆಳಮಟ್ಟದಲ್ಲಿರಲು ಸಕಾರಣಗಳನ್ನು ವಿಶ್ಲೇಷಿಸದೆ, ಯಾಂತ್ರಿಕವಾಗಿ ಏಳನೇ ಯೋಜನೆಯಲ್ಲಿ ಅದೇ ದರಗಳನ್ನು ಪುನರುಚ್ಚರಿಸಲಾಗಿದೆ. ಅವುಗಳ ಸಾಧ್ಯಾಸಾಧ್ಯತೆಯ ವಿಮರ್ಶೆ ಮಾಡಲೇ ಇಲ್ಲ. ಅರ್ಥಶಾಸ್ತ್ರಜ್ಞರು ಸರ್ವಸಾಮಾನ್ಯವಾಗಿ ಟೀಕಿಸುವಂತೆ, ಇದುವರೆಗೆ ಪಂಚವಾರ್ಷಿಕ ಯೋಜನೆಗಳಲ್ಲಿ ಒಟ್ಟು ಆರ್ಥಿಕ ಅಭ್ಯುದ್ಧಿದರ ಶೇ. 3 ರಿಂದ 3.5 ಕ್ಕಿಂತ, ಅರ್ಥಾತ್ "ಹಿಂದೂ ದರ" ಕ್ಕಿಂತ ಹೆಚ್ಚಾಗಲೇ ಇಲ್ಲ !

## ಕೈಗಾರಿಕಾಭಿವೃದ್ಧಿಯ ಹಿನ್ನಡೆ

ಕೈಗಾರಿಕಾಭಿವೃದ್ಧಿಯ ದರ ಏಳನೇ ಯೋಜನೆಯಲ್ಲಿ ಶೇ. 8 ರಷ್ಟು ಎಂದು ನಿಗದಿ ಮಾಡಿದರೂ, ಈ ಪ್ರಮಾಣದ ಸಾಧನೆ ಕಷ್ಟ ಸಾಧ್ಯ. ಕಾರಣ 1. ಕೈಗಾರಿಕಾಭಿವೃದ್ಧಿಗೆ ಸಾರ್ವಜನಿಕ ರಂಗದ ವಿಸ್ತರಣೆ ಹಾಗೂ ಅಭಿವೃದ್ಧಿ ಅತ್ಯಗತ್ಯ, ಆದರೆ, ಈ ಮೊದಲೇ ತಿಳಿಸಿದಂತೆ, ಸಾರ್ವಜನಿಕ ರಂಗವು ಸಂಪನ್ಮೂಲಗಳ ಅಭಾವದಿಂದ ಕುಂಟುತ್ತಿದೆ. ಪರಿಣಾಮವಾಗಿ ಕಲ್ಲಿದ್ದಲು, ಉಕ್ಕು, ವಿದ್ಯುತ್, ತೈಲ, ರೈಲ್ವೆ ಭಾರೀ ಯಂತ್ರೋಪಕರಣ, ಇತ್ಯಾದಿ ಮೂಲಭೂತ ಕೈಗಾರಿಕೆಗಳ ಉತ್ಪಾದನೆ ಸ್ಥಗಿತಗೊಳ್ಳಲಿದೆ.

2 ಹೊಸ ಆರ್ಥಿಕ ನೀತಿಯಲ್ಲಿ ಅಗ್ರಸ್ಥಾನ ಪಡೆದಿರುವ ಖಾಸಗೀ ರಂಗದ ಗುತ್ತೇದಾರಿ ಕೈಗಾರಿಕಾ ಸಂಸ್ಥೆಗಳೂ ವಿದೇಶಿ ಬಹುರಾಷ್ಟ್ರೀಯ ಸಂಸೆ

ಗಳೂ ತಮ್ಮ ಸಂಪನ್ಮೂಲಗಳನ್ನು ಮಾರುಕಟ್ಟೆಯ ಏಕಸ್ವಾಮ್ಯತೆ ಪಡೆಯಲು ಪರಸ್ಪರ ಹಾಗೂ ಸಣ್ಣ ಮತ್ತು ಮಧ್ಯಮ ಕೈಗಾರಿಕೋದ್ಯಮಗಳ ವಿರುದ್ಧ ಸ್ಪರ್ಧೆಗಾಗಿ, ರಾಜಕೀಯ ಹಾಗೂ ಆಡಳಿತ ವಶೀಲಿಗಾಗಿ, ಅಕ್ರಮವಾಗಿ ಆದಾಯ, ಆಸ್ತಿಗಳಿಸಿ ಕಪ್ಪುಹಣದ ಸಾಮ್ರಾಜ್ಯ ವಿಸ್ತರಣೆಗಾಗಿ ಹೆಚ್ಚಾಗಿ ಬಳಸುವುವು. ಮಿಕ್ಕುಳಿದ ಸಂಪನ್ಮೂಲಗಳನ್ನು ಹೆಚ್ಚು ಲಾಭದಾಯಕವಾದ ರಫ್ತು ಆಧರಿತ ಕೈಗಾರಿಕೋತ್ಪಾದನೆಗಳಿಗೂ ಮತ್ತು ಆಂತರಿಕವಾಗಿ ಶ್ರೀಮಂತ ವರ್ಗದ ಸುಖ ಭೋಗದ ವಸ್ತುಗಳ (ಟಿ. ವಿ. ವಿಡಿಯೋ, ಕಾರುಗಳು, ಕಂಪ್ಯೂಟರ್,ಫ್ರಿಜ್, ಏರ್ ಕಂಡೀಶನರ್, ಶ್ರೇಷ್ಠ ದರ್ಜೆಯ ಉಡುಗೆ, ಪಿಠೋಪಕರಣಗಳು, ಪಾನೀಯ, ಸೌಂದರ್ಯ ಸಾಧನೆಗಳು ಇತ್ಯಾದಿ) ಉತ್ಪಾದನೆಗೇ ಆಧ್ಯತೆ ನೀಡುವುದು. ಪರಿಣಾಮವಾಗಿ. ಹೆಚ್ಚು ಲಾಭದಾಯಕವಲ್ಲದ ಧೀರ್ಘಕಾಲ ಹಿಡಿಯುವ, ಬೃಹತ್ ಬಂಡವಾಳದ ಮೂಲಭೂತ ಕೈಗಾರಿಕೆಗಳ ಉತ್ಪಾದನೆ ಸ್ಥಗಿತಗೊಳ್ಳುವುದು. ಯೋಜನೆಯ ಮೊದಲ ವರ್ಷದ ಎಂಟು ತಿಂಗಳಲ್ಲಿಯೇ (ಏಪ್ರಿಲ್, ನವಂಬರ್ 1985) ತಿರುವುಮುರುವಿನ ಅಸಮತೋಲನೆಯ ಕೈಗಾರಿಕೋತ್ಪಾದನೆಯ ಮಾದರಿ ಕಂಡು ಬಂದಿದೆ. ಈ ಅವಧಿಯಲ್ಲಿ ಉತ್ಪಾದನಾ ದರವು ಶೇ.. 8.8 ರಷ್ಟಾಗಿದ್ದರೂ, ಶ್ರೀಮಂತ ವರ್ಗದ ಸುಖಭೋಗದ ಬಾಳಿಕೆಯ ವಸ್ತುಗಳ ಉತ್ಪಾದನೆ ಶೇ 12 9 ರಷ್ಟು ಹೆಚ್ಚಾಗಿದ್ದು, ಮೂಲಭೂತ ಕೈಗಾರಿಕೋತ್ಪಾದನೆ ಶೇ 3.8 ರಷ್ಟು ಹೆಚ್ಚಾಗಿತ್ತು. ಜೊತೆಗೆ, ಅಡಿಗೆ ತೈಲ,ಸಕ್ಕರೆಹತ್ತಿ ಬಟ್ಟೆ, ತೈಲ, ಸಕ್ಕರೆ, ಇತ್ಯಾದಿ ಜನಸಾಮಾನ್ಯರಅಡಿಗೆಜೀವನಾವಶ್ಯಕವಸ್ತುಗಳ ಉತ್ಪಾದನೆ ಕುಂಠಿತವಾಗುತ್ತಿದೆ.

3. ನಮ್ಮ ದೇಶದ ರಫ್ತು ವ್ಯಾಪಾರ ಹೆಚ್ಚಾಗಿ ಬಂಡವಾಳಶಾಹಿ ರಾಷ್ಟ್ರಗಳ ಮಾರುಕಟ್ಟೆಯನ್ನವಲಂಬಿಸಿರುವುದರಿಂದ, ಅಲ್ಲಿನ ಆರ್ಥಿಕ ದುಃಸ್ಥಿತಿಗಳಿಂದ ಸ್ವರಕ್ಷಣಾ ಧೋರಣೆಗಳಿಂದ ಮತ್ತು ಅಂತರ್ರಾಷ್ಟ್ರೀಯ ತೀವ್ರ ಸ್ಪರ್ಧೆಗಳಿಂದ ನಮ್ಮ ರಫ್ತು ಹೆಚ್ಚಿಸಿಕೊಳ್ಳುವ ಸಾಧ್ಯತೆ ತೀರಾ ಕಡಿಮೆ. ಆಂತರಿಕ ಮಾರುಕಟ್ಟೆಯಲ್ಲಿಯೂ ಶ್ರೀಮಂತರ ಸುಖಭೋಗದ ಟಿ. ವಿ. ಮೊದ

ಲಾದ ಬಾಳಿಕೆಯ ವಸ್ತುಗಳ ಬೇಡಿಕೆಯು ಹೆಚ್ಚು ಕಾಲ ಉಳಿಯಲಾರದು. ಅಂತಿಮವಾಗಿ, ಕೈಗಾರಿಕೋತ್ಪಾದನೆಯು ಆಂತರಿಕ ಮಾರುಕಟ್ಟೆಯನ್ನೇ ಅವಲಂಬಿಸಬೇಕಾಗುವುದು, ಜನ ಸಾಮಾನ್ಯರ ಜೀವನಾವಶ್ಯಕ ವಸ್ತುಗಳ ಉತ್ಪಾದನೆಯನ್ನೇ ಆಧರಿಸಿರಬೇಕಾಗುವುದು. ಆದರೆ, ಬಡತನ, ನಿರುದ್ಯೋಗ, ಬೆಲೆ ಏರಿಕೆ, ಹಣ ದುಬ್ಬರಗಳಿಂದಾಗಿ ನಿರಂತರವಾಗಿ ದೇಶದ ಜನಕೋಟಿ ತಮ್ಮ ಗ್ರಾಹಕ ಶಕ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಆದುದರಿಂದಲೇ ಇಂದು 80000 ಸಣ್ಣ ಹಾಗೂ ಮಧ್ಯಮ ಕೈಗಾರಿಕೋಧ್ಯಮ ಸಂಸ್ಥೆಗಳು ದಿವಾಳಿ ಹೋಗುವ ದಾರಿಯಲ್ಲಿವೆ! ಬಂಡವಾಳಶಾಹಿ ಆರ್ಥಿಕ ಅಭಿವೃದ್ಧಿಯ ವೈರುಧ್ಯ ಇರುವುದೇ ಇಲ್ಲಿ. ಅಭಿವೃದ್ಧಿಗಾಗಿ ಖಾಸಗೀ ಲಾಭ ಮತ್ತು ಸರಕಾರದ ತೆರಿಗೆ, ಕೃತಕ ಹಣ ಸೃಷ್ಟಿ, ಸಾಲ, ಬೆಲೆ ಏರಿಕೆಗಳ ಮೂಲಕ ಜನ ಸಾಮಾನ್ಯರನ್ನು ಶೋಷಣೆ ಮಾಡಿ ಸಂಪನ್ಮೂಲ ಸಂಗ್ರಹಿಸಲಾಗುತ್ತದೆ. ಅವನ್ನು ಉತ್ಪಾದನೆಯಲ್ಲಿ ತೊಡಗಿಸಿದಾಗ ಮಾರುಕಟ್ಟೆ ಇಲ್ಲದೆ ಅಭಿವೃದ್ಧಿ ಮುರುಟಿಕೊಳ್ಳುತ್ತದೆ.



4. ಭಾರತದ ಸಂದರ್ಭದಲ್ಲಿ ಕೈಗಾರಿಕೋತ್ಪಾದನೆಯು ಅಂತಿಮವಾಗಿ ಆಂತರಿಕ ಮಾರುಕಟ್ಟೆಯನ್ನೇ ಅವಲಂಬಿಸಬೇಕೆಂದಾಗ, ದೇಶದ ಶೇ. 75-80ರಷ್ಟು ಜನಸಂಖ್ಯೆ ಗ್ರಾಮೀಣ ಪ್ರದೇಶಗಳಲ್ಲಿರುವುದರಿಂದ, ಕೈಗಾರಿಕೋತ್ಪಾದನೆಗೆ ಪೂರಕವಾದ ಮಾರುಕಟ್ಟೆ ಭಾರತದ ಗ್ರಾಮೀಣ ಪ್ರದೇಶದಲ್ಲಿದೆ ಎಂದು ಸ್ಪಷ್ಟವಾಗುವುದು. ಗ್ರಾಮೀಣ ಜನರ ಗ್ರಾಹಕ ಶಕ್ತಿ ಹೆಚ್ಚಬೇಕಾದರೆ ಗಣನೀಯ ಪ್ರಮಾಣದಲ್ಲಿ ಭೂ ಸುಧಾರಣೆ ಆಗಬೇಕಾಗಿದೆ. ಭೂ ಹಿಡುವಳಿಯ ಕೇಂದ್ರೀಕರಣ ಹೋಗಲಾಡಿಸಿ ಬಡ ರೈತರಿಗೂ ಭೂ ರಹಿತ ಕೃಷಿ ಕಾರ್ಮಿಕರಿಗೂ ಮರುವಿತರಣೆ ಮಾಡಬೇಕಾಗಿದೆ ಈ ಕ್ರಮ ಕೃಷಿ ಉತ್ಪಾದನೆ ಹೆಚ್ಚಿಸಲಿಕ್ಕೂ ಸೂಕ್ತ ಸಾಧನವಾಗಿದೆ. ಆದರೆ, ದೇಶದ ರಾಜ್ಯ ಪ್ರಭುತ್ವವು ಬಂಡವಾಳಶಾಹಿಗಳು ಭೂಮಾಲಿಕರ ಒಕ್ಕೂಟವಾಗಿರುವುದರಿಂದ ಭೂ ಮಾಲಿಕ ಪದ್ಧತಿಯನ್ನು ಸ್ವಾತಂತ್ರ್ಯ ನಂತರದ 39 ವರ್ಷಗಳಲ್ಲಿಯೂ ಪರಿಣಾಮಕಾರಿಯಾಗಿ ರದ್ದುಗೊಳಿಸಲಿಲ್ಲ.

## ಕೃಷಿ ಉತ್ಪಾದನೆಯಲ್ಲಿ ಹಿನ್ನಡೆ

ಏಳನೇ ಯೋಜನೆಯಲ್ಲಿ ಕೃಷಿ ಉತ್ಪಾದನೆಯು ಹೆಚ್ಚಳದ ದರ ಶೇ. 4 ರಷ್ಟು ಎಂದು ನಿಗದಿ ಮಾಡಿದ್ದರೂ, ಇದನ್ನು ಸಾಧಿಸುವುದು ಅಸಾಧ್ಯವಾಗಿದೆ. ಆಹಾರ ಧಾನ್ಯಗಳ ಉತ್ಪಾದನೆಯೇ 1983-84 ರಲ್ಲಿ 152. 4ಮಿ. ಟನ್ ಗರಿಷ್ಠ ಮಟ್ಟಕ್ಕೇರಿದ್ದರೂ 1984-85 ರಲ್ಲಿ 146.2ಮಿ. ಟನ್‌ಗೆ ಇಳಿಯಿತು. ಹೊಸ ಯೋಜನೆಯ ಮೊದಲ ವರ್ಷವಾದ 1985-86 ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆ 150 ಮಿ. ಟನ್ ಗಳಷ್ಟೇ ಆಗಬಹುದೆಂದು ಅಂದಾಜು ಮಾಡಲಾಗಿದ್ದು, 1983-84 ರ ಗರಿಷ್ಟ ಮಟ್ಟವನ್ನೂ ತಲುಪಲಾರದು. ಈ ದರದಲ್ಲಿ 1980-90 ರಷ್ಟರಲ್ಲಿ 178/183 ಮಿ. ಟನ್ ಆಹಾರ ಧಾನ್ಯ ಉತ್ಪಾದಿಸುವುದು ಕನಸಿನ ಮಾತೇ ಸರಿ. ಕಾರಣ :

1. ಸಾರ್ವಜನಿಕ ರಂಗದ ಅಭಿವೃದ್ಧಿಯು ಸಂಪನ್ಮೂಲದ ಕೊರತೆಯಿಂದ ಕುಂಟುತ್ತಿದ್ದು, ನೀರಾವರಿ, ವಿದ್ಯುತ್, ಗೊಬ್ಬರ, ಮುಂತಾದ ಅತ್ಯಗತ್ಯದ ಸೌಕರ್ಯಗಳು ಕೃಷಿ ಕ್ಷೇತ್ರಕ್ಕೆ ಸಿಗುತ್ತಿಲ್ಲ.

2. ಪರಿಣಾಮಕಾರಿ ಭೂ ಸುಧಾರಣೆ ಇಲ್ಲದೆ, ದೇಶದ ಕೆಲವೇ ಪ್ರದೇಶಗಳಿಗೆ ಸೀಮಿತವಾಗಿ ಕೇವಲ ಶ್ರೀಮಂತ ಭೂಮಾಲೀಕರನ್ನು ಮತ್ತು ಶ್ರೀಮಂತ ರೈತರನ್ನು ಆಧರಿಸಿ ಕೈಗೊಂಡಿರುವ "ಹಸಿರು ಕ್ರಾಂತಿ" ಯು ಮುನ್ನಡೆ ಸ್ಥಗಿತ ಗೊಂಡಿದೆ.

3. ಕೃಷಿ ಉತ್ಪಾದನೆಯ ವೆಚ್ಚಗಳು ದಿನದಿನಕ್ಕೂ ಹೆಚ್ಚುತ್ತಿದ್ದು, ಅದಕ್ಕನುಗುಣವಾಗಿ ಫಸಲಿಗೆ ಯೋಗ್ಯ ಬೆಲೆ ರೈತರಿಗೆ ಸಿಗುತ್ತಿಲ್ಲ.

4. ಒಂದೆಡೆ, ಅಪಾರ ಪ್ರಮಾಣದ ವ್ಯವಸಾಯ ಭೂಮಿ ವ್ಯವಸಾಯವಾಗದೆ ಬರಡು ಬಿದ್ದಿದೆ. ಇನ್ನೊಂದೆಡೆ, ಬಡ ರೈತರೂ, ಭೂ ಹೀನ ಕೃಷಿ ಕಾರ್ಮಿಕರೂ ಬೆಲೆ ಏರಿಕೆ, ಹಣ ದುಬ್ಬರ, ಬಡತನ, ನಿರುದ್ಯೋಗ.

ಋಣ ಭಾರದಿಂದ ನಿರ್ಗತಿಕರಾಗುತ್ತಿದ್ದಾರೆ. ಅವರ ಗ್ರಾಹಕ ಶಕ್ತಿ ಎಷ್ಟು ಕ್ಷಯಿಸಿದೆ ಎಂದರೆ, ಜೀವನಾವಶ್ಯಕ ಕೈಗಾರಿಕಾ ವಸ್ತುಗಳನ್ನು ಕೊಳ್ಳುವುದಿರಲಿ, ಹಸಿವು ತಣಿಸಿಕೊಳ್ಳಲು ಅಗತ್ಯವಾದಷ್ಟು ಆಹಾರ ಧಾನ್ಯಗಳನ್ನೂ ಕೊಂಡುಕೊಳ್ಳಲು ಅಶಕ್ತರಾಗಿದ್ದಾರೆ. ಪರಿಣಾಮವಾಗಿ ಸರಕಾರದ ಗೋದಾಮುಗಳಲ್ಲಿಯೇ 30 ಮಿ. ಟನ್ ಆಹಾರ ಧಾನ್ಯಗಳು ಗ್ರಾಹಕರಿಲ್ಲದೆ ಕೊಳೆತು ನಾರುತ್ತಿವೆ ! ಅವುಗಳ ಉತ್ಪಾದನಾ ವೆಚ್ಚ ಹೆಚ್ಚಾಗಿರುವುದರಿಂದ ಅವುಗಳಿಗೆ ರಫ್ತು ಮಾರುಕಟ್ಟೆಯೂ ಸಿಗುತ್ತಿಲ್ಲ. ನಷ್ಟದಲ್ಲಿಯಾದರೂ ದಾಸ್ತಾನುಗೊಳಿಸಿದ ಆಹಾರ ಧಾನ್ಯಗಳನ್ನು ರಫ್ತು ಮಾಡಲು ಪ್ರಯತ್ನಿಸಲಾಗುತ್ತಿದೆಯೇ ಹೊರತು, ಅವುಗಳನ್ನು ಗ್ರಾಮೀಣ ಬಡ ಜನರಿಗೆ ಸುಲಭ ಬೆಲೆಗೆ ವಿತರಣೆ ಮಾಡುವ ಯೋಚನೆ ರಾಜೀವ ಗಾಂಧಿಯ ಘನ ಸರಕಾರಕ್ಕಿಲ್ಲ.

5. ದೇಶದ ಕೃಷಿ ಉತ್ಪಾದನೆ ಇಂದಿಗೂ ಹೆಚ್ಚಾಗಿ ನೈಸರ್ಗಿಕ ಹವಾಮಾನವನ್ನೇ ಅವಲಂಬಿಸಿದೆ. ಮಳೆಯಾದರೆ ಬೆಳೆ, ಇಲ್ಲವಾದ ಇಲ್ಲ. ಆಹಾರ ದಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಲಾಗಿದೆ ಎಂದು ಹೊಗಳಿಕೊಳ್ಳಲಾಗುತ್ತಿದೆ, ಆದರೆ, ಒಂದು ಭೀಕರ ಬರಗಾಲ ಬಂದರೆ ಕೃಷಿ ಉತ್ಪಾದನೆ ಇಳಿಮುಖವಾಗಿ ಸರಕಾರದ ಆಹಾರ ಧಾನ್ಯಗಳ ಸಂಗ್ರಹವೆಲ್ಲಾ ಒಂದೇ ವರ್ಷದಲ್ಲಿ ಕರಗಬಹುದು.

ಇದುವರೆಗಿನ ಪಂಚವಾರ್ಷಿಕ ಯೋಜನೆಗಳಲ್ಲಿ ಭೂ ಸುಧಾರಣೆಯ ಅಗತ್ಯತೆಯನ್ನು ಔಪಚಾರಿಕವಾಗಿಯಾದರೂ ಪ್ರಸ್ತಾಪಿಸಲಾಗುತ್ತಿತ್ತು. ಆದರೆ ಏಳನೇ ಯೋಜನೆಯ ಕರಡು ಪ್ರತಿಯಲ್ಲಿ ಈ ಕುರಿತು ಕೆಲವು ಹಾರಿಕೆಯ ಪ್ರಸ್ತಾಪ ಮಾಡಲಾಗಿದ್ದರೂ, ಅಂತಿಮವಾಗಿ ರೂಪುಗೊಂಡ ಯೋಜನೆಯಲ್ಲಿ ಭೂ ಸುಧಾರಣೆಯ ಪ್ರಸ್ತಾಪವೇ ಇಲ್ಲ !

ಗ್ರಾಮೀಣ ಭಾರತದ ಪರಿಸ್ಥಿತಿ ಇಂದಿಗೂ ಚಿಂತಾಜನಕವಾಗಿದೆ. ಶೇ. 70 ರಷ್ಟು ಆಹಾರ ಧಾನ್ಯಗಳ ಉತ್ಪಾದನೆ ಕೇವಲ ಶೇ. 15 ರಷ್ಟು ಮಧ್ಯ

ಸಾಯ ಭೂಮಿಯಲ್ಲಿ ಕೇಂದ್ರಿಕೃತವಾಗಿದೆ. ಶೇ. 6 ರಷ್ಟು ಶ್ರೀಮಂತ ಭೂ ಹಿಡುವಳಿದಾರರ ನಿಯಂತ್ರಣದಲ್ಲಿ ಶೇ. 33 ರಷ್ಟು ವ್ಯವಸಾಯ ಭೂಮಿ ಕೇಂದ್ರೀಕೃತವಾಗಿದೆ. ಎಂ. ಅದಿಶೇಷಯ್ಯನವರ ಸಮೀಕ್ಷೆಯಂತೆ (ಫೈನಾನ್ಸಿಯಲ್ ಎಕ್ಸ್‌ಪ್ರೆಸ್ : 8-11-85) ಭೂ ಸುಧಾರಣೆ ಪ್ರಾರಂಭವಾದಂದಿನಿಂದ 1984 ರ ಅಂತ್ಯದವರೆಗೆ :

ಒಟ್ಟು 43.25 ಲಕ್ಷ ಎಕರೆ ಹೆಚ್ಚುವರಿ ಭೂಮಿ ಎಂದು ಘೋಷಿಸಲಾಯಿತು.

ಆದರಲ್ಲಿ, 30.40 ಲಕ್ಷ ಎಕರೆ ಹೆಚ್ಚುವರಿ ಭೂಮಿಯನ್ನು ಸರಕಾರ ವಶಪಡಿಸಿಕೊಂಡಿತು.

21.64 ಲಕ್ಷ ಎಕರೆ ಭೂಮಿಯನ್ನು 16.28 ಲಕ್ಷ ಕುಟುಂಬಗಳಿಗೆ ಮರು ವಿತರಣೆ ಮಾಡಲಾಯಿತು.

1984 ರಲ್ಲಿ 2 ಲಕ್ಷ ಹೆಚ್ಚುವರಿ ಭೂಮಿಯನ್ನು ಮರು ವಿತರಣೆ ಮಾಡಬೇಕೆಂಬ ಗುರಿಯಿದ್ದರೂ, ಕೇವಲ 1.29 ಲಕ್ಷ ಎಕರೆ ಭೂಮಿಯಷ್ಟೇ ಮರುವಿತರಣೆ ಮಾಡಲಾಯಿತು. ಈ ಪ್ರಮಾಣದಲ್ಲಿ ಘೋಷಿತ ಹೆಚ್ಚುವರಿ ಭೂಮಿಯಲ್ಲಿ ಇನ್ನೂ ಉಳಿದಿರುವ 21.61 ಲಕ್ಷ ಎಕರೆ ಭೂಮಿಯನ್ನು ಈ ಶತಮಾನದ ಅಂತ್ಯದವರೆಗೂ ಮರುವಿತರಣೆ ಮಾಡಿ ಮುಗಿಯದು.

ಸದ್ಯ 24 ಲಕ್ಷ ಭೂಮಾಲಿಕರು ತಲಾ 25 ಎಕರೆಗಳಿಗಿಂತ ಹೆಚ್ಚು ಹಾಗೂ ಸರಾಸರಿ 45 ಎಕರೆಗಳಷ್ಟು ಭೂ ಸ್ವಾಮ್ಯ ಹಾಗೂ ನಿಯಂತ್ರಣ ಹೊಂದಿದ್ದರೆ ಇದು ಒಟ್ಟು ವ್ಯವಸಾಯ ಭೂಮಿಯ ಶೇ. 26.3 ರಷ್ಟು, ಅಂದರೆ 10.80 ಲಕ್ಷ ಎಕರೆ.

ಭೂಮಿಗಿಂತ ಹೆಚ್ಚು ಇರುವ ಒಟ್ಟು ವ್ಯವಸಾಯ ಭೂಮಿ 1080 ಲಕ್ಷ ಎಕರೆಗಳ ಬದಲು 3000 ಲಕ್ಷ ಎಕರೆಗಳು. ಭೂಸುಧಾರಣೆಯ ಭೂಮಿತಿಕಾಯಿದೆಯ ಅನುಷ್ಠಾನದ ನಗೆಪಾಟಲು ಇಲ್ಲಿ ಕಂಡು ಬರುವುದು.

ಈ ಬೃಹತ್ ಪ್ರಮಾಣದ ಹೆಚ್ಚುವರಿ ಭೂಮಿಯನ್ನು ಮರುವಿತರಣೆ ಮಾಡಲು ಎಷ್ಟು ಕಾಲ ಬೇಕಾಗುವುದು ? ಭೂಸ್ವಾಮ್ಯದ ಇಷ್ಟೊಂದು ಕೇಂದ್ರೀಕರಣದಿಂದ.ಕೃಷಿ ಉತ್ಪಾದನೆ ಸ್ಥಗಿತಗೊಂಡಿದೆ.

**ನಿರುದ್ಯೋಗ ಮತ್ತು ಬಡತನ ನಿವಾರಣೆ ?**

ಏಳನೇ ಯೋಜನೆಯಲ್ಲಿ 40 ಮಿ. ಜನರಿಗೆ ಹೊಸ ಉದ್ಯೋಗಾವಕಾಶ ನೀಡಲು ಯೋಜಿಸಲಾಗಿದೆ. ಆದರೆ, ಅದೇ ಅವಧಿಯಲ್ಲಿ ಹೆಚ್ಚು ಕಡಿಮೆ ಅಷ್ಟೇ ಪ್ರಮಾಣದಲ್ಲಿ ಹೊಸ ಉದ್ಯೋಗಾಕಾಂಕ್ಷಿಗಳು ಉದ್ಯೋಗ ಮಾರುಕಟ್ಟೆಗೆ ಬರಲಿರುವರು. ಯೋಜನೆಯ ಹೊಸ ಉದ್ಯೋಗಾವಕಾಶದ ಗುರಿ ಸಾಧಿಸಿದರೂ, ಈಗಿನ ಮಟ್ಟದ ನಿರುದ್ಯೋಗ ಮುಂದುವರಿಯುವುದು !

ಉದ್ಯೋಗ ವಿನಿಮಯಗಳ ಅಂಕೆ ಸಂಖ್ಯೆಗಳಂತೆ, ನಿರುದ್ಯೋಗಸ್ಥರ ಸಂಖ್ಯೆಯು ಒಂದಾದ ಮೇಲೊಂದು ಯೋಜನೆಯ ನಂತರ ಹೆಚ್ಚುತ್ತಲೇ ಇವೆ. ಉದಾ :

| | 1961 | 1971 | 1981 | 1985 |
|---|---|---|---|---|
| ಒಟ್ಟು ನಿರುದ್ಯೋಗಸ್ಥರು (ಮಿಲಿಯಗಳಲ್ಲಿ) | 1.83 | 5.10 | 17.84 | 25.0 |
| ಒಟ್ಟು ವಿದ್ಯಾವಂತ ನಿರುದ್ಯೋಗಸ್ಥರು (ಮಿಲಿಯಗಳಲ್ಲಿ) | 0.59 | 2.30 | 9.02 | 12.0 |

(ಶೈಲಜಾ ಬಾಪಟ್, ಇಕನಾಮಿಕ್ಸ್ ಟೈಂಸ್ : 6-11-85)

120 ಲಕ್ಷ ವಿದ್ಯಾವಂತ ನಿರುದ್ಯೋಗಸ್ಥರಲ್ಲಿ, 68 10 ಲಕ್ಷ ಮೆಟ್ರಿಕ್ ಪಾಸಾದವರು, 29.44 ಲಕ್ಷ ಪಿ. ಯು. ಸಿ. ಪಾಸಾದವರು, 20.68 ಲಕ್ಷ

ಪದವೀಧರರು ಮತ್ತು ಸ್ನಾತಕೋತ್ತರ ಪದವೀಧರರು (ಮಲ್ಕಂ ಆದಿಶೇಷಯ್ಯ, ಫೈನಾನ್ಸಿಯಲ್ ಎಕ್ಸ್‌ಪ್ರೆಸ್ : 8-11-85) ವಿದ್ಯಾವಂತರ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಲು ಯೋಜನೆಯಲ್ಲಿ ಪರಿಣಾಮ ಕಾರಿ ಕಾರ್ಯಕ್ರಮಗಳೇನೂ ಇಲ್ಲ. ಬದಲು ವಿದ್ಯಾವಂತರ ಸಂಖ್ಯೆಯನ್ನೇ ಕಡಿಮೆ ಮಾಡಲು ಉದ್ಯೋಗವನ್ನು ಪದವಿಯಿಂದ ಪ್ರತ್ಯೇಕಿಸುವ ಹೊಸ ಶಿಕ್ಷಣವನ್ನು ರೂಪಿಸಲಾಗುತ್ತಿದೆ !

ಆರನೇ ಯೋಜನೆಯ ಅವಧಿಯಲ್ಲಿ ಸಂಘಟಿತ ಕ್ಷೇತ್ರದಲ್ಲಿ ಉದ್ಯೋಗಾವಕಾಶ ಬಹಳ ಮಂದಗತಿಯಲ್ಲಿ ಹೆಚ್ಚಿರುವುದನ್ನು ಗಮನಿಸಬಹುದು. ಮೊದಲ ನಾಲ್ಕು ವರ್ಷಗಳಲ್ಲಿ, 1980-81 ರಿಂದ 1983-84 ರ ಅವಧಿಯಲ್ಲಿ, ಒಟ್ಟು ಉದ್ಯೋಗಸ್ಥರ ಸಂಖ್ಯೆ 228.72 ಲಕ್ಷದಿಂದ 242.90 ಲಕ್ಷಕ್ಕೆ ಏರಿ, ನಿವ್ವಳ 14.18 ಲಕ್ಷದಷ್ಟೇ ಹೆಚ್ಚಾಯಿತು. ಅಂದರೆ, ವಾರ್ಷಿಕ ಉದ್ಯೋಗಾವಕಾಶದ ಸರಾಸರಿ ಏರಿಕೆಯ ದರ ಕೇವಲ ಶೇ 2 ರಷ್ಟು. ಈ ಅಲ್ಪ ಏರಿಕೆಯಲ್ಲಿಯೂ ಸಾರ್ವಜನಿಕ ರಂಗದ ಪಾಲು 9.1 ಲಕ್ಷವಾದರೆ, ಖಾಸಗೀ ರಂಗದಲ್ಲಿ ನಿವ್ವಳ ಉದ್ಯೋಗಸ್ಥರ ಸಂಖ್ಯೆ 1.2 ಲಕ್ಷದಷ್ಟು ಕಡಿಮೆಯಾಗಿದೆ !

ಸಂಘಟಿತ ಕ್ಷೇತ್ರದಲ್ಲಿ, ಹೆಚ್ಚು ಬಂಡವಾಳ ಮೂಲದ ಮತ್ತು ಹೈ ಟೆಕ್ನಾಲಜಿ ಆಧರಿತ ಕೈಗಾರಿಕಾಭಿವೃದ್ಧಿಯಾಗಲಿರುವುದರಿಂದ ಬಂಡವಾಳ ಹೂಡುವಿಕೆ ಮತ್ತು ಉತ್ಪಾದನೆ ಸ್ವಲ್ಪ ಹೆಚ್ಚಿದರೂ ಅದೇ ಪ್ರಮಾಣದಲ್ಲಿ ಉದ್ಯೋಗಾವಕಾಶ ಹೆಚ್ಚಾಗಲಾರದು. ಆಧುನೀಕರಣ, ಕಂಪ್ಯೂಟರ್ ಬಳಕೆಗಳಿಂದ, ವಿದ್ಯುತ್ ಅಭಾವ, ಮಾರುಕಟ್ಟೆಯ ಅಭಾವ, ಏಕಸ್ವಾಮ್ಯದ ವಿಸ್ತರಣೆಗಾಗಿ ತೀವ್ರ ಸ್ಪರ್ಧೆಗಳಿಂದ ಉದ್ಯೋಗಾವಕಾಶ ಮುಂದಿನ ವರ್ಷಗಳಲ್ಲಿ ಸಂಘಟಿತ ಕ್ಷೇತ್ರದಲ್ಲಿ ಇನ್ನೂ ಇಳಿಮುಖವಾಗಲಿದೆ. ಅನಿಯಂತ್ರಿತ ಲಾಕ್‌ಔಟ್, ಲೇಆಫ್, ಕ್ಲೋಶರ್‌ಗಳೂ ಉದ್ಯೋಗಾವಕಾಶಗಳನ್ನು ಕುಂಠಿತಗೊಳಿಸಲಿರುವುವು.

ವಿದ್ಯಾವಂತ ನಿರುದ್ಯೋಗಸ್ಥರಿಗೆ ಸ್ವಯಂ ಉದ್ಯೋಗ ದೊರಕಿಸುವ ಯೋಜನೆ 1983-84 ರಲ್ಲಿ ಪ್ರಾರಂಭಗೊಂಡು ವರ್ಷಕ್ಕೆ ಕೇವಲ 2 5 ಲಕ್ಷ ಜನರಿಗೆ ಉದ್ಯೋಗಾವಕಾಶ ಸಿಗುತ್ತಿದೆ. ಸಂಪನ್ಮೂಲದ ಅಭಾವದಿಂದ ಮತ್ತು ಒಟ್ಟು ಕೈಗಾರಿಕಾ ಅಭಿವೃದ್ಧಿಯ ಮಂದಗತಿಯಿಂದ ಈ ತಾತ್ಕಾಲಿಕ ಕಾರ್ಯಕ್ರಮ ಎಷ್ಟು ಕಾಲ ಮುಂದುವರಿಯುವುದು ಮತ್ತು ಎಷ್ಟು ಜನರಿಗೆ ಉದ್ಯೋಗದೊರಕಿಸಲು ಶಕ್ತವಾಗುವುದುಎಂದು ಹೇಳಲಸಾಧ್ಯ. ನಿರುದ್ಯೋಗ ನಿವಾರಣೆಗೆ ಈ ಯೋಜನೆಯನ್ನು ನಂಬಲಾಗದು.

ಈ ಮೊದಲೇ ಹೇಳಿದಂತೆ, ಸಾವಿರಾರು ಸಣ್ಣ ಕೈಗಾರಿಕಾ ಸಂಸ್ಥೆಗಳು ನಷ್ಟದ ದಾರಿಯಲ್ಲಿವೆ ಜನರ ಗ್ರಾಹಕ ಶಕ್ತಿ ಕುಸಿಯುತ್ತಿರುವುದರಿಂದ ಖಾದಿ ಮತ್ತು ಗ್ರಾಮೋದ್ಯೋಗಗಳ ವಿಸ್ತರಣೆಯೂ ಕುಂಟುತ್ತಿದೆ. 1983 ರಲ್ಲಿ ಈ ಎರಡು ಕ್ಷೇತ್ರಗಳಲ್ಲಿ ಅನುಕ್ರಮವಾಗಿ 84 ಲಕ್ಷ ಮತ್ತು 35.5 ಲಕ್ಷ ಉದ್ಯೋಗಸ್ಥರಿದ್ದರು. ಈ ಕ್ಷೇತ್ರಗಳಲ್ಲಿಯೂ ಏಳನೇ ಯೋಜನೆಯಲ್ಲಿ ನಿರೀಕ್ಷಿಸಿದಷ್ಟು ಉದ್ಯೋಗ ಹೆಚ್ಚಳ ಸಾಧ್ಯವಾಗಲಾರದು. ಹೊಸ ಆರ್ಥಿಕ ನೀತಿಯಲ್ಲಿ ಸಣ್ಣ ಕೈಗಾರಿಕೆಗಳಿಗೆ ಮೀಸಲಾಗಿರಿಸಿದ ಕ್ಷೇತ್ರಗಳನ್ನೂ ದೊಡ್ಡ ಕೈಗಾರಿಕೆಗಳಿಗೆ ತೆರೆದಿಡಲಾಗಿದೆ ಲಾಭದಾಯಕವಾದ ಬಟ್ಟೆ ತಯಾರಿಕೆ ಸಂಘಟಿತ ಬಟ್ಟೆ ಗಿರಣಿಗಳಿಗೆ ಬಿಟ್ಟು ಕೊಟ್ಟು, ಹೆಚ್ಚು ವೆಚ್ಚದ ಮತ್ತು ಕಡಿಮೆ ಬೇಡಿಕೆಯ ಬಟ್ಟೆ ಉತ್ಪಾದನೆಯನ್ನು ಕೈಮಗ್ಗಗಳಿಗೆ ಬಿಟ್ಟು ಕೊಡಲಾಗಿದೆ. ಸಣ್ಣ ಕೈಗಾರಿಕೆಗಳು ತೆರಿಗೆ ಹೆಚ್ಚಳ, ಮಾರುಕಟ್ಟೆ ಅಭಾವ ಇತ್ಯಾದಿ ಸಮಸ್ಯೆಗಳಿಂದ ದುರ್ಬಲವಾಗುತ್ತಿದೆ, ಸರಕಾರದ ಪಕ್ಷಪಾತ ಧೋರಣೆಯ ವಿರುದ್ಧ ಇತ್ತೀಚೆಗೆ ದೇಶದ ಎಲ್ಲಾ ಸಣ್ಣ ಕೈಗಾರಿಕಾ ಘಟಕಗಳು "ಭಾರತ್ ಬಂದ್" ಆಚರಿಸಿರುವುದನ್ನು ಇಲ್ಲಿ ಗಮನಿಸಬಹುದು.

ದೇಶದ ಒಟ್ಟು 2600 ಲಕ್ಷ ಉದ್ಯೋಗಾಕಾಂಕ್ಷಿಗಳಲ್ಲಿ ಕೇವಲ 365 5 ಲಕ್ಷ ಜನರಿಗೆ (ಶೇ. 14) ಮೇಲಿನ ವಿವಿಧ ಮೂಲಗಳಿಂದ ಉದ್ಯೋಗ ಸಿಕ್ಕಿದರೆ, ಉಳಿದ 2235 ಲಕ್ಷ ಜನರು (ಶೇ. 86) ಹೆಚ್ಚಾಗಿ

ಹಳ್ಳಿ ಪಟ್ಟಣಗಳ ಬಡಜನರು, ಬಡರೈತರು, ಭೂಹೀನ ಕೃಷಿ ಕಾರ್ಮಿಕರು ಭೂಸುಧಾರಣೆಯಂತಹ ಮೂಲಭೂತವಾದ ಬದಲಾವಣೆಯಾಗದೆ, ಆಸ್ತಿ ಆದಾಯಗಳ ಮರುವಿತರಣೆಯಾಗದೆ, ಬಡತನ ನಿವಾರಣೆಯಾಗಲಾರದು, ನಿರುದ್ಯೋಗ ಸಮಸ್ಯೆ ನೀಗಲಾರದು.

ಬಡತನದ ನಿವಾರಣೆಯ ಸೋಗಿನಲ್ಲಿ ಕೆಲವು ಪರಿಹಾರ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ ಅಷ್ಟೆ. ಮೊದಲ ಎರಡು 20 ಅಂಶಗಳ ಆರ್ಥಿಕ ಕಾರ್ಯಕ್ರಮಗಳು ಮತ್ತು ನಂತರದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (ಎನ್.ಆರ್.ಇ.ಪಿ.) ಗ್ರಾಮೀಣ ಭೂರಹಿತರಿಗೆ ಉದ್ಯೋಗ ಖಾತರಿಯ ಕಾರ್ಯಕ್ರಮ (ಆರ್ ಎಲ್ ಇ ಜಿ ಪಿ) ಮತ್ತು ಸ್ವಉದ್ಯೋಗಕ್ಕಾಗಿ ಗ್ರಾಮೀಣ ಯುವ ಜನರಿಗೆ ತರಬೇತಿ ನೀಡುವ ರಾಷ್ಟ್ರೀಯ ಯೋಜನೆ (ಟಿ ಆರ್ ವೈ ಎಸ್ ಇ ಎಂ)ಈ ಸಾಲಿಗೆ ಸೇರಿದವುಗಳು. ಇವುಗಳ ಸಾಧನೆಗಳನ್ನು ಇಲ್ಲಿ ವಿವರವಾಗಿ ವಿಶ್ಲೇಷಿಸಲು ಬಯಸುವುದಿಲ್ಲ. ಆದರೆ ಆರನೇ ಯೋಜನೆಯಲ್ಲಿ ಬಡತನ ರೇಖೆಯ ಕೆಳಮಟ್ಟದಲ್ಲಿರುವ ಜನಸಂಖ್ಯೆಯ ಪ್ರಮಾಣ ಶೇ. 48 ರಿಂದ ಶೇ. 37 ಕ್ಕೆ ಇಳಿದಿರುವುದೆಂಬ ಸರ್ಕಾರದ ಹೇಳಿಕೆ ಹಾಗೂ ಆಧಾರದಲ್ಲಿ ಏಳನೇ ಯೋಜನೆಯ ಅಂತ್ಯದಲ್ಲಿ ಇದರ ಪ್ರಮಾಣ ಶೇ. 26ಕ್ಕೆ ಇಳಿಸುವ ಮತ್ತು ಈ ಶತಮಾನದ ಅಂತ್ಯದಲ್ಲಿ ಶೇ 5 ಕ್ಕೆ ಇಳಿಸುವ ಗುರಿ ಕೇವಲ ಪ್ರಚಾರಕ್ಕಷ್ಟೆ ಪ್ರಯೋಜನ ! ಪ್ರಾಯಶಃ ಇಲ್ಲಿ ಬಡತನ ನಿವಾರಣೆಯ ಬದಲು ಬಡತನದ ಅರ್ಥ ವ್ಯಾಪ್ತಿಯನ್ನೇ ಬದಲಿಸಲು ಪ್ರಯತ್ನ ನಡೆದಿರುವುದೇ ಎಂದು ಸಂಶಯಿಸಬೇಕಾಗುವುದು !

ಏಳನೇ ಯೋಜನೆಯಲ್ಲಿ ಎನ್. ಆರ್. ಇ. ಪಿ. ಮತ್ತು ಆರ್. ಎಲ್. ಇ. ಜಿ. ಪಿ- ಯೋಜನೆಗಳಲ್ಲಿ ಒಟ್ಟು ವರ್ಷಕ್ಕೆ 490 ಮಿ. ಮಾನವ ದಿನಗಳ ಉದ್ಯೋಗಾವಕಾಶ ಒದಗಿಸಲು ಯೋಜಿಸಿದೆ. ಇಷ್ಟು ಪ್ರಮಾಣದಲ್ಲಿ ಆರನೇ ಯೋಜನೆಯಲ್ಲಿಯೂ ಸಾಧಿಸಲಾಗಿದೆ. ಎಂದು ಸರ್ಕಾರವೇ ಹೇಳಿಕೊಳ್ಳುತ್ತಿದ್ದಾಗ (ಈ ಸಾಧನೆಯೂ ಸತ್ಯಕ್ಕೆ ದೂರ), ಏಳನೇ ಯೋಜನೆಯಲ್ಲಿ ಗ್ರಾಮೀಣ ಉದ್ಯೋಗಾವಕಾಶದಲ್ಲಿ ಹೆಚ್ಚಳ ಎಲ್ಲಿದೆ ?

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮಕ್ಕೆ (ಎನ್ ಆರ್ ಇ ಪಿ) 1983-84 ರಲ್ಲಿ ರೂ. 536 ಕೋಟಿ ಮೀಸಲಾಗಿರಿಸಿದ್ದು, ರೂ 392 ಕೋಟಿ ಮಾತ್ರ ಖರ್ಚು ಮಾಡಲಾಗಿತ್ತು. ಆಹಾರ ಧಾನ್ಯ 2.66 ಲಕ್ಷಟನ್ ಮೀಸಲಾಗಿರಿಸಿದ್ದು 1.47 ಲಕ್ಷಟನ್ ಮಾತ್ರ ಖರ್ಚುಮಾಡಲಾಗಿತ್ತು. ಪರಿಣಾಮವಾಗಿ 322 ಮಿಲಿಯ ದಿನಗಳ ಉದ್ಯೋಗ ಒದಗಿಸಲು ಉದ್ದೇಶಿಸಲಾಗಿದ್ದು, ಕೇವಲ 303 ಮಿ. ದಿನಗಳ ಉದ್ಯೋಗಾವಕಾಶ ಉಂಟಾಗಿತ್ತು. 1984-85ರಲ್ಲಿ ಈ ಯೋಜನೆಯಲ್ಲಿ ಕೇವಲ 240 ಮಿ. ದಿನಗಳ ಉದ್ಯೋಗಾವಕಾಶಉಂಟಾಗಿದೆಎಂದು ತಿಳಿದುಬಂದಿದೆ (ಗ್ರಾಮೀಣ ಅಭಿವೃದ್ಧಿ ಇಲಾಖೆ, ಫೈನಾನ್ಸಿಯಲ್ ಎಕ್ಸ್‌ಪ್ರೆಸ್ 8-11-85). ಸಾಧನೆಯ ಹಿನ್ನೆಲೆಯಲ್ಲಿ ಏಳನೇ ಯೋಜನೆಯ ಗುರಿ ಮುಟ್ಟುವುದು ವರ್ಷಕ್ಕೆ 490 ಮಿ ದಿನಗಳ ಉದ್ಯೋಗಾವಕಾಶ ಒದಗಿಸುವುದು ಎಷ್ಟು ಕಷ್ಟಸಾಧ್ಯ ಎಂದು ತಿಳಿಯುವುದು

ಗ್ರಾಮೀಣ ಬಡತನ, ನಿರುದ್ಯೋಗ ಕಾರ್ಯಕ್ರಮಗಳಿಗೆ ಸರ್ಕಾರದ ಸಂಪನ್ಮೂಲಗಳ ಕೊರತೆಯಿಂದ ಸಾಕಷ್ಟು ಹಣ ಒದಗಿಸಲಾಗುವುದಿಲ್ಲ. ಆಡಳಿತದ ಅದಕ್ಷತೆಯಿಂದ ಒದಗಿಸಿದಷ್ಟು ಹಣವೂ ಈ ಕಾರ್ಯಕ್ರಮಗಳಿಗೆ ವ್ಯಯವಾಗುವುದಿಲ್ಲ. ಮಧ್ಯವರ್ತಿಗಳ ಹಾಗೂ ಗ್ರಾಮೀಣ ಸ್ಥಾಪಿತ ಹಿತಾಸಕ್ತಿಗಳ ಬಿಗಿ ಹಿಡಿತದಿಂದ ಈ ಕಾರ್ಯಕ್ರಮಗಳಲ್ಲಿ ವ್ಯಯಿಸಿದ ಹಣ ಮತ್ತು ಆಹಾರ ಧಾನ್ಯಗಳು ಸಂಪೂರ್ಣವಾಗಿ ಬಡ ಜನರಿಗೆ ಮುಟ್ಟುವುದಿಲ್ಲ. ಹೀಗಿದೆ ಇದರ ವಿಷವರ್ತುಲ !

## ಪರ್ಯಾಯ ಮಾರ್ಗ

ದೆಹಲಿ ಮತ್ತು ಕಲ್ಕತ್ತಾದಲ್ಲಿ 1985 ರ ಮಧ್ಯ ಭಾಗದಲ್ಲಿ ನಡೆದ ಸುಪ್ರಸಿದ್ಧ ಸಮಾಜ ವಿಜ್ಞಾನಿಗಳ ಸಮಾವೇಶಗಳಲ್ಲಿ ಈಗಿನ ಬಂಡವಾಳಶಾಹಿ ಪದ್ಧತಿಯ ಚೌಕಟ್ಟಿನಲ್ಲಿಯೇ ಕೆಲವು ಜನಪರ ಕಾರ್ಯಕ್ರಮಗಳನ್ನು ಆರ್ಥಿಕ ಅಭಿವೃದ್ಧಿ ಸಾಧಿಸಲು, ಕೃಷಿ ಕೈಗಾರಿಕೆಗಳಲ್ಲಿ ಉತ್ಪಾದನೆ ಮತ್ತು ಉದ್ಯೋಗ ಹೆಚ್ಚಿಸಲು ಕೆಲವು ಪರ್ಯಾಯ ಮಾರ್ಗಗಳನ್ನು ಸೂಚಿಸಿದ್ದಾರೆ. (ನೋಡಿ

ಯಲ್ ಸೈಂಟಿಸ್ಟ್, ಜುಲೈ-ಆಗಸ್ಟ್, 1985) ಮುಖ್ಯವಾಗಿ :

1. ಬೃಹತ್ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಮೂಲಕ ದುಡಿಯುವ ಜನರ ಗ್ರಾಹಕ ಶಕ್ತಿಯನ್ನು ಹೆಚ್ಚಿಸಬೇಕು.

2. ಈ ಮೂಲಕ ಸಾಮೂಹಿಕ ಬಳಕೆಯ ವಸ್ತುಗಳ ಕೈಗಾರಿಕೆಗಳನ್ನು ಪುನರುಜ್ಜೀವಗೊಳಿಸಿ, ಕೈಗಾರಿಕಾಭಿವೃದ್ಧಿಗೆ ಉತ್ತೇಜನ ನೀಡಬೇಕು.

3. ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಬೃಹತ್ ಕಾರ್ಯಕ್ರಮಗಳಿಗೆ ಶ್ರೀಮಂತರ ಆಸ್ತಿ-ಆದಾಯಗಳ ಮೇಲೆ ಏರಿಕೆಯ ದರದಲ್ಲಿ ನೇರ ತೆರಿಗೆ ಹೊರಿಸಿ ಹೊಸ ಸಂಪನ್ಮೂಲ ಸಂಗ್ರಹಿಸಬೇಕು ಸದ್ಯ ರಾಷ್ಟ್ರೀಯ ಆದಾಯದ ಶೇ. 20 ರಷ್ಟು ವರ್ಷಕ್ಕೆ ಕಪ್ಪುಹಣ ಸೃಷ್ಟಿಯಾಗುತ್ತಿದೆ, ಅರ್ಥಾತ್ ಸುಮಾರು 30000 ಕೋಟಿ, ಇದರಲ್ಲಿ ಆಸ್ತಿವಂತರ ಲಾಭ, ಬಾಡಿಗೆ ಆದಾಯದ ಪಾಲೇ ಹೆಚ್ಚು. ಕಪ್ಪು ಹಣದ ಮೂರನೇ ಒಂದಂಶದಷ್ಟಾದರೂ ತೆರಿಗೆಯ ರೂಪದಲ್ಲಿ ಸಂಗ್ರಹಿಸಿದರೆ ಸರಕಾರಕ್ಕೆ 10000 ಕೋಟಿ ವರ್ಷಕ್ಕೆ ದೊರಕುವುದು. ಗ್ರಾಮೀಣ ಪ್ರದೇಶದ ಶ್ರೀಮಂತ ಭೂಮಾಲಿಕರ ಹಾಗೂ ಶ್ರೀಮಂತ ರೈತರ ಆಸ್ತಿ ಆದಾಯಗಳ ಮೇಲೆ ನೇರ ತೆರಿಗೆ ವಿಧಿಸುವ ಮೂಲಕ ವರ್ಷಕ್ಕೆ ರೂ 700 ಕೋಟಿ ಸಂಗ್ರಹಿಸಬಹುದು.

4. ಸದ್ಯ ಬಡತನ ರೇಖೆಯ ಕೆಳಗೆ 300 ಮಿಲಿಯ ಜನರಿರುವರೆಂದು ಅಂದಾಜು ಮಾಡಲಾಗಿದ್ದು, ಪ್ರತಿಕುಟುಂಬಕ್ಕೆ(5 ಜನರ), ತಿಂಗಳಿಗೆ ರೂ.100 ವರ್ಷಕ್ಕೆ ರೂ. 1200 ವರಮಾನ ಬರುವಂತೆ ಉದ್ಯೋಗಾವಕಾಶಗಳನ್ನು ಒದಗಿಸಲು ವರ್ಷಕ್ಕೆ ರೂ. 10000 ಕೋಟಿ ವಿನಿಯೋಗಿಸಬೇಕು. (1985-86 ರಲ್ಲಿ ರೂ. 1239 ಕೋಟಿ, 1986-87 ರಲ್ಲಿ ರೂ. 1851 ಕೋಟಿ ಈ ಉದ್ದೇಶಕ್ಕೆ ಮೀಸಲಾಗಿರಿಸಿದ್ದು ಎಷ್ಟು ಗೌಣ ಎಂದು ಗಮನಿಸಬೇಕು. ಜೊತೆಗೇ, ಸರಕಾರದ ದಾಸ್ತಾನಿನಲ್ಲಿರುವ 30 ಮಿ. ಟನ್ ಆಹಾರ ಧಾನ್ಯಗಳನ್ನೂ ಈ ಕಾರ್ಯಕ್ರಮಗಳಿಗೆ ಬಳಸಬೇಕು ಜನಕೋಟಿ ಅನ್ನ ಇಲ್ಲದೆ ಸಾಯುತ್ತಿರುವಾಗ ಅಕ್ಕಿ,ಗೋದಿ ರಫ್ತು ಮಾಡುವುದನ್ನು ರದ್ದುಗೊಳಿಸಬೇಕು.

5. ಬಡತನ, ನಿರುದ್ಯೋಗ ನಿವಾರಣೆಯ ಕಾರ್ಯಕ್ರಮಗಳನ್ನು ಆದಷ್ಟು ವಿಕೇಂದ್ರೀಕರಿಸಬೇಕು, ಪಂಚಾಯತು, ಜಿಲ್ಲಾ ಸಮಿತಿಗಳಿಗೆ ಇವುಗಳನ್ನು ಕಾರ್ಯಗತಗೊಳಿಸುವ ಅಧಿಕಾರ ಕೊಡಬೇಕು ನೌಕರಶಾಹಿ ಹಾಗೂ ಸ್ಥಾಪಿತ ಹಿತಾಸಕ್ತಿಗಳನ್ನು ದೂರಗೊಳಿಸಬೇಕು. ರೈತ-ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳಿಗೆ ಈ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವಲ್ಲಿ ಪ್ರಾತಿನಿಧ್ಯವಿರಬೇಕು.

6. ವಿದೇಶಿ ವಿನಿಮಯ ಉಳಿತಾಯ ಮಾಡಲು, ಅನಗತ್ಯ ಸಾಮಗ್ರಿಗಳ ತಂತ್ರಜ್ಞಾನದ ಆಮದನ್ನು ನಿಲ್ಲಿಸಬೇಕು.

7. ಕಳ್ಳ ಸಂತೆಗಾರರ, ಕಪ್ಪು ಹಣವಂತರ, ಅಕ್ರಮ ಸಂಗ್ರಹಕಾರರ, ಅಕ್ರಮ ಸಾಗಣಿಗೆದಾರರ, ತೆರಿಗೆ ಗಳ್ಳರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಬೇಕು.

8. ಬೆಲೆ ಏರಿಕೆ, ಹಣದುಬ್ಬರವನ್ನು ತಡೆಯಲು ಜೀವನಾವಶ್ಯಕ ವಸ್ತುಗಳ ಮೇಲಿನ ಅಪ್ರತ್ಯಕ್ಷ ತೆರಿಗೆ ಭಾರ ಗಣನೀಯವಾಗಿ ಕಡಿಮೆಮಾಡಬೇಕು. ಆಹಾರಧಾನ್ಯ, ಬಟ್ಟೆ, ಅಡಿಗೆ ತೈಲ, ಸೀಮೆ ಎಣ್ಣೆ ಇತ್ಯಾದಿ ಜೀವನಾವಶ್ಯಕ ವಸ್ತುಗಳನ್ನು ವ್ಯಾಪಕವಾಗಿ ನ್ಯಾಯಬೆಲೆಗಳಲ್ಲಿ ದೇಶಾದ್ಯಂತ ಸಾರ್ವಜನಿಕ ವಿತರಣೆಯ ಮೂಲಕ ಜನಸಾಮಾನ್ಯರಿಗೆ ಒದಗಿಸಬೇಕು. ಗ್ರಾಮೀಣಪ್ರದೇಶಗಳಿಗೂ ಸಾರ್ವಜನಿಕ ವಿತರಣೆಯ ವ್ಯವಸ್ಥೆಯ.ನ್ನು ವಿಸ್ತರಿಸಬೇಕು.

9. ಸಾರ್ವಜನಿಕ ಕ್ಷೇತ್ರವನ್ನು ಸಾಮ್ರಾಜ್ಯಶಾಹಿಗಳ ವಿರುದ್ಧ, ಗುತ್ತೇದಾರಿ ಬಂಡವಾಳದ ವಿರುದ್ಧ ಬಳಸಬೇಕು. ಸ್ವಾವಲಂಬನೆಗಾಗಿ, ದುಡಿಯುವ ಜನರ ಪರವಾಗಿ ಬಳಸಬೇಕು. ಇವುಗಳ ಆಡಳಿತವನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸಬೇಕು, ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳಿಗೇ ಹೆಚ್ಚು ಪ್ರಾತಿನಿಧ್ಯ ನೀಡಬೇಕು. ಸಾರ್ವಜನಿಕ ಸಂಸ್ಥೆಗಳು ಜನರಿಗೆ ಮತ್ತು ಸಂಸತ್ತಿಗೆ ಮಾತ್ರ ಹೊಣೆಯಾಗಿರಬೇಕು. ವಿಶ್ವಬ್ಯಾಂಕ್‌ಗಲ್ಲ, ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಗಲ್ಲ.

10. ಸ್ವಾವಲಂಬನೆಯ, ಸಾರ್ವಜನಿಕ ರಂಗದ ಆದ್ಯತೆಯ, ಭೂ ಸುಧಾರಣೆಯ, ಹೆಚ್ಚು ಉದ್ಯೋಗ ನೀಡುವ, ಸುಖಭೋಗ ವಸ್ತುಗಳ ಉತ್ಪಾದನೆಗಿಂತ ಜೀವನಾವಶ್ಯಕ ವಸ್ತುಗಳನ್ನು ಹೆಚ್ಚಿಸಿ ಉತ್ಪಾದಿಸುವ, ಜನಪರ ಕಾರ್ಯಕ್ರಮಗಳನ್ನು ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಸಂಸ್ಥೆಗಳು, ಗುತ್ತೇದಾರಿ ಬಂಡವಾಳಶಾಹಿಗಳು, ಭೂಮಾಲಿಕರು ವಿರೋಧಿಸುವರು ಅವರ ವಿರುದ್ಧ ಜನಶಕ್ತಿಯನ್ನು ಸಂಘಟಿಸಬೇಕು.

೨೮

# ಅಪಮೌಲ್ಯದ ಅಪಾಯದಲ್ಲಿ ರೂಪಾಯಿ

## ಮುಂಗಡ ಪತ್ರದ ಪೂರ್ವ ಸಮೀಕ್ಷೆ

1986-87ರ ಕೇಂದ್ರ ಮುಂಗಡ ಪತ್ರದ ಪೂರ್ವ ಸಮೀಕ್ಷೆಯಂತೆ, ಸಂಪನ್ಮೂಲ ಸಂಗ್ರಹದ ವಿದಾನಗಳಾದ ಉಳಿತಾಯ, ತೆರಿಗೆ, ಸಾಲ, ತಮ್ಮ ಸಾಮರ್ಥ್ಯಗಳನ್ನು ಪೂರ್ಣಗೊಳಿಸಿ, ಹೆಚ್ಚಿನ ಸಂಪನ್ಮೂಲಗಳಿಗೆ ಕೊರತೆ ಹಣ ಸೃಷ್ಟಿ ಅಥವಾ ಸಾರ್ವಜನಿಕ ಕ್ಷೇತ್ರದ ಉತ್ಪಾದನೆಗಳ ಹಾಗೂ ಸೇವಾ ಸೌಲಭ್ಯಗಳ ಬೆಲೆ ಹೆಚ್ಚಿಸುವುದಲ್ಲದೇ ಅನ್ಯಮಾರ್ಗವೇ ಇಲ್ಲ ಎಂದು ಕೇಂದ್ರ ಅರ್ಥ ಮಂತ್ರಿ ವಿ. ಪಿ. ಸಿಂಘ್ ತಿಳಿಸಿದ್ದಾರೆ. ಅಲ್ಲದೆ, ಅಭಿವೃದ್ಧಿ ಮತ್ತು ಅನಭಿವೃದ್ಧಿ ವೆಚ್ಚದಲ್ಲಿ ಶೇ. 5 ರಷ್ಟು ಕಡಿತಗೊಳಿಸುವ ಅನಿವಾರ್ಯತೆಯನ್ನೂ ತಿಳಿಸಿದ್ದಾರೆ, "ಬೆಲೆ ಏರಿಕೆ ಸಹಿಸಿರಿ, ಅಥವಾ ಯೋಜನೆಯಲ್ಲಿ ಕಡಿತ ಎದುರಿಸಿರಿ" ಎಂದು ಸವಾಲು ಹಾಕಿದ್ದಾರೆ. ಪ್ರಧಾನಿ ರಾಜೀವಗಾಂಧಿಯೂ "ಮುಂದಿನ ದಿನಗಳಲ್ಲಿ ಕೆಲವು ಕಠಿಣ ನಿರ್ಧಾರಗಳನ್ನು ಕೈಗೊಳ್ಳಬೇಕಾಗುವುದು" ಎಂದು ಎಚ್ಚರಿಕೆ ನೀಡಿದ್ದಾರೆ. (ಆಧಾರ : ಹಣಕಾಸು ಮತ್ತು ಯೋಜನಾ ಖಾತೆಗಳ ಸಂಸತ್ ಸದಸ್ಯರ ಸಲಹಾ ಸಮಿತಿಗಳ ಇತ್ತೀಚಿಗಿನ ಸಭೆಗಳಲ್ಲಿ ಅರ್ಥ ಮಂತ್ರಿ ಮತ್ತು ಪ್ರಧಾನ ಮಂತ್ರಿಗಳ ಭಾಷಣ, ಇಂಡಿಯನ್ ಎಕ್ಸ್‌ಪ್ರೆಸ್ : 12-2-86)

ಮೇಲಿನ ಸಮೀಕ್ಷೆಯಲ್ಲಿ 86-87ರಲ್ಲಿ ಕೇಂದ್ರ ಸರಕಾರದ ಒಟ್ಟು ವೆಚ್ಚ ರೂ. 51147 ಕೋಟಿ ಎಂದೂ, ಅದರಲ್ಲಿ ಯೋಜನಾ ವೆಚ್ಚವು ರೂ.

1998.5 ಕೋಟಿ ಎಂದೂ (1984-85ರ ದರದಲ್ಲಿ ರೂ. 1800 ಕೋಟಿ) ಅಂದಾಜು ಮಾಡಲಾಗಿದೆ. ಈ ವೆಚ್ಚಕ್ಕೆ ಸರಿದೂಗುವಂತೆ, ರೂ. 37030 ಕೋಟಿ ಹಣ ಉಳಿತಾಯ, ತೆರಿಗೆ, ಸಾಲಗಳ ಮೂಲದಿಂದ ಬರಲಿರುವುದೆಂದೂ, ರೂ. 6755 ಕೋಟಿ ಸಾರ್ವಜನಿಕ ಕ್ಷೇತ್ರದಿಂದ ಸಿಗಲಿರುವುದೆಂದೂ, ಬಾಕಿ ಸುಮಾರು ರೂ. 7400 ಕೋಟಿಯಷ್ಟು ಹಣ ಸಂಗ್ರಹದಲ್ಲಿ ಇನ್ನಷ್ಟು ರೂ. 4700 ಕೋಟಿ ಸಾರ್ವಜನಿಕ ಕ್ಷೇತ್ರದಿಂದಲೂ ರೂ. 2700 ಕೋಟಿ ಕೃತಕ ಹಣ ಸೃಷ್ಟಿಯಿಂದಲೂ ಒದಗಿಸಬೇಕೆಂದು ಅಂದಾಜು ಮಾಡಲಾಗಿದೆ. ಅಂದರೆ, ಒಟ್ಟು ರೂ.51147 ಕೋಟಿ ವಾರ್ಷಿಕವೆಚ್ಚದಲ್ಲಿ, ರೂ. 19845 ಕೋಟಿ ಯೋಜನಾ ವೆಚ್ಚದಲ್ಲಿ, ಸಾರ್ವಜನಿಕ ಕ್ಷೇತ್ರದಿಂದ ನಿರೀಕ್ಷಿಸುವ ಸಂಪನ್ಮೂಲ ರೂ. 11,455 ಕೋಟಿಯಷ್ಟು; ಅನುಕ್ರಮವಾಗಿ ಶೇ 22.4 ಮತ್ತು ಶೇ 57 7ರಷ್ಟು ! ಸಾರ್ವಜನಿಕ ಕ್ಷೇತ್ರದಿಂದ ನಿರೀಕ್ಷಿಸಿದಷ್ಟು ಸಂಪನ್ಮೂಲ ಸಂಗ್ರಹವಾಗದಿದ್ದರೆ, ಇನ್ನಷ್ಟು ಕೃತಕ ಹಣ ಸೃಷ್ಟಿ ಅಥವಾ ಯೋಜನೆಯಲ್ಲಿ ಕಡಿತ !

## ಬೆಲೆ ಏರಿಕೆ

ಏಳನೇ ಯೋಜನೆಯ ಮೊದಲ ವರ್ಷದ (1985-86) ಕೊರತೆಯನ್ನು ಕಡಿಮೆ ಮಾಡಲು, ಎರಡನೇ ವರ್ಷಕ್ಕೆ (1986-87) ಸಾಕಷ್ಟು ಸಂಪನ್ಮೂಲ ಪಡೆಯಲು, ಕಳೆದ ಎರಡು ತಿಂಗಳ ಅವಧಿಯಲ್ಲಿ ಕಲ್ಲಿದ್ದಲ ಬೆಲೆ ಶೇ. 14.7 ಸಾರ್ವಜನಿಕ ಗೋಧಿ ವಿತರಣೆಯ ಬೆಲೆಶೇ11,ರಸಗೊಬ್ಬರಗಬೆಲೆ ಶೇ10ರಷ್ಟು ಏರಿಸುದುದೇ ಅಲ್ಲದೆ, ಪೆಟ್ರೋಲ್, ಡಿಸಲ್ ಶೇ. 11, ಸೀಮೇ ಎಣ್ಣೆ, ಅಡಿಗೆ ಅನಿಲ, ಮುಂತಾದ ದಿನ ಬಳಕೆಯ ಪೆಟ್ರೋಲಿಯಂ ಪದಾರ್ಥಗಳ ಬೆಲೆಗಳನ್ನು ವಿಪರೀತವಾಗಿ ಏರಿಸಲಾಯಿತು. ಇದರಿಂದ, 1985-86ಕ್ಕೆ ರೂ.300ಕೋಟಿ ಮತ್ತು 1986-87ಕ್ಕೆ ರೂ 1700 ಕೋಟಿ ಹೆಚ್ಚಿನ ಸಂಪನ್ಮೂಲ ಪಡೆಯಲು ಉದ್ದೇಶಿಸಲಾಗಿದೆ. ಪೆಟ್ರೋಲಿಯಂ ಪದಾರ್ಥಗಳ ಬೆಲೆ ಏರಿಕೆಯಿಂದಲೇ

ಮುಂದಿನ ವರ್ಷದಲ್ಲಿ ರೂ 560 ಕೋಟಿ (ಮೊದಲು ರೂ. 800 ಕೋಟಿ) ಹೆಚ್ಚು ಹಣ ಸಂಗ್ರಹಿಸುವ ನಿರೀಕ್ಷೆ ಇದೆ. ಇನ್ನೂ 3000 ಕೋಟಿ ಹಣ ಸಾರ್ವಜನಿಕ ರಂಗದಿಂದ ಪಡೆಯಬೇಕಾಗಿದೆ, ರೂ. 2700 ಕೋಟಿ ನಿವ್ವಳ ಕೊರತೆಯನ್ನು ನೀಗಿಸಬೇಕಾಗಿದೆ. ಸಂಪನ್ಮೂಲ ಸಂಗ್ರಹದ ಕೊರತೆಯನ್ನು ನೀಗಿಸಲು ಪರಿಹಾರೋಪಾಯಗಳನ್ನು ಸೂಚಿಸುವವರಿಗೆ ಸೂಕ್ತ "ಬಹುಮಾನ" ಕೊಡುವುದಾಗಿ ಅರ್ಥಮಂತ್ರಿ ಘೋಷಿಸಿದ್ದಾರೆ ! ಅಂದರೆ, ಅಪ್ರತ್ಯಕ್ಷ ತೆರಿಗೆ ಹೆಚ್ಚಿಸಲು ಹಾಗೂ ಸಾರ್ವಜನಿಕ ಕ್ಷೇತ್ರದ ಉತ್ಪಾದನೆಗಳ ಬೆಲೆ ಏರಿಸಲು ಇನ್ನೇನಾದರೂ ಜೀವನಾವಶ್ಯಕ ವಸ್ತುಗಳು ಉಳಿದಿದ್ದರೆ, ಅವುಗಳ ಪಟ್ಟಿಯನ್ನು ಮಾನ್ಯ ಅರ್ಥ ಮಂತ್ರಿಗೆ ಸೂಚಿಸಿ "ಬಹುಮಾನ" ಪಡೆಯಬಹುದು !

ಹೊಸ ಆರ್ಥಿಕ ನೀತಿ ಮತ್ತು ಹಣ ಕಾಸು ನೀತಿಯಿಂದ, ಶ್ರೀಮಂತರಿಗೆ ಆಸ್ತಿ, ಲಾಭ, ಆದಾಯಗಳ ಮೇಲಿನ ಪ್ರತ್ಯಕ್ಷ ತೆರಿಗೆಗಳಲ್ಲಿ ಭಾರೀ ರಿಯಾಯಿತಿಗಳನ್ನು ಕೊಡಿಸಿ, ಸರಕಾರದ ಆಡಳಿತ ಮತ್ತು ಅಭಿವೃದ್ಧಿ ವೆಚ್ಚಕ್ಕೆ ಅಪ್ರತ್ಯಕ್ಷ ತೆರಿಗೆ, ಸಾರ್ವಜನಿಕ ಕ್ಷೇತ್ರದ ಉತ್ಪಾದನೆಗಳ ಬೆಲೆ ಏರಿಸುವಿಕೆ, ಕೃತಕ ಹಣ ಸೃಷ್ಟಿ ಮಾಧ್ಯಮಗಳನ್ನು ಅನುಸರಿಸುವುದರಿಂದ, ಕಾಂಗ್ರೆಸ್ ಸರಕಾರದ ವರ್ಗ ಗುಣ ಇನ್ನಷ್ಟು ಸ್ಪಷ್ಟವಾಗುತ್ತಿದೆ.

ಜೀವನಾವಶ್ಯಕ ವಸ್ತುಗಳ ಬೆಲೆ ಏರಿಕೆಯು ಎಷ್ಟು ಅನಗತ್ಯ ಹಾಗೂ ಅಸಮಂಜಸ ಎಂದು ಗಮನಿಸಬೇಕು.

ಸಂಸತ್ತಿನ ಬಜೆಟ್ ಅಧಿವೇಶನ ಕೆಲವೇ ದಿನಗಳಲ್ಲಿ ನಡೆಯುವುದು ತಿಳಿದಿದ್ದು, ಏಕಪಕ್ಷೀಯವಾಗಿ ಕೇಂದ್ರ ಸರಕಾರ ಆಡಳಿತ ನಿರ್ದೇಶನಗಳ ಮೂಲಕ ಜೀವನಾವಶ್ಯಕ ವಸ್ತುಗಳ ಬೆಲೆ ಏರಿಸಿ ಸುಮಾರು ರೂ. 2000 ಕೋಟಿಯಷ್ಟು ವಾರ್ಷಿಕ ಅಪ್ರತ್ಯಕ್ಷ ತೆರಿಗೆ ವಿಧಿಸಿದ್ದು ಸಂಸದೀಯ ಪ್ರಜಾಪ್ರಭುತ್ವಕ್ಕೆ ವಿರುದ್ಧವಾಗಿದೆ. ಅಪಮಾನ ಮಾಡಿದಂತಾಗಿದೆ. ಈ ಬೆಲೆ ಏರಿಕೆಯಿಂದ ಬರುವ ಹೆಚ್ಚಿನ ಆದಾಯವೆಲ್ಲಾ ಕೇಂದ್ರದ ಪಾಲಾಗುತ್ತದೆ.

ಆದರೆ ಈ ಪೆಟ್ರೋಲ್, ಇತ್ಯಾದಿ ಏರಿಕೆಗಳ ಫಲವಾದ ದುಬಾರಿ ವೆಚ್ಚವನ್ನು ರಾಜ್ಯ ಸರ್ಕಾರ ಭರಿಸಬೇಕಾಗುತ್ತದೆ. ಈ ದುಬಾರಿ ಹೊರೆಯನ್ನು ಹೊಂಸುವಾಗ ಸಂವಿಧಾನದಲ್ಲಿ ರಾಜ್ಯಗಳಿಗೆ ಪಾಲು ದಕ್ಕಬೇಕೆಂದು ನಮೂದಿಸಲಾಗಿರುವ ತೆರಿಗೆಗಳನ್ನು ಹೆಚ್ಚಿಸದೆ, ರಾಜ್ಯಗಳ ನ್ಯಾಯಬದ್ಧ ಪಾಲನ್ನು ವಂಚಿಸುವ ಈ ರೀತಿ ಬೆಲೆ ಏರಿಕೆಯಿಂದ ಕೇಂದ್ರ ರಾಜ್ಯ ಸಂಬಂಧಗಳು ಮತ್ತಷ್ಟು ಹದಗೆಡುತ್ತವೆ.

ಅಪ್ರತ್ಯಕ್ಷ ತೆರಿಗೆ, ಸಾರ್ವಜನಿಕ ಕ್ಷೇತ್ರದ ಉತ್ಪಾದನೆಗಳ ಬೆಲೆ ಏರಿಕೆ ಮತ್ತು ಕೃತಕ ಹಣ ಸೃಷ್ಟಿಯ ಬದಲು, ಶ್ರೀಮಂತ ವರ್ಗದ ಆಸ್ತಿ, ಆದಾಯ ಲಾಭಗಳಿಕೆಯ ಮೇಲೆ ಹೆಚ್ಚು ಪ್ರತ್ಯಕ್ಷ ತೆರಿಗೆ ಹಾಕಬಹುದಾಗಿತ್ತು. ಭೂಮಾಲೀಕ ಹಾಗೂ ಶ್ರೀಮಂತ ರೈತರ ಕೃಷಿ ಹಿಡುವಳಿ ಅಥವಾ ಉತ್ಪಾದನೆಯ ಆಧಾರದಲ್ಲಿ ಪ್ರತ್ಯಕ್ಷ ತೆರಿಗೆ ಹಾಕಬಹುದಾಗಿತ್ತು. ಶ್ರೀಮಂತ ವರ್ಗದ ದುಂದು ವೆಚ್ಚದ ಮೇಲೆ, ಭೋಗ ವಸ್ತುಗಳ ಖರೀದಿಯ ಮೇಲೆ ಪ್ರತ್ಯಕ್ಷ ಯಾ ಅಪ್ರತ್ಯಕ್ಷ ತೆರಿಗೆ ಹಾಕಬಹುದಾಗಿತ್ತು. ದೇಶದಲ್ಲಿ ಕಪ್ಪು ಹಣ ಕನಿಷ್ಟ ರೂ. 37000 ಕೋಟಿ, ಗರಿಷ್ಟ ರೂ.7000ಕೋಟಿ ಎಂದು ಅಂದಾಜು ಮಾಡಲಾಗಿದ್ದು, ಅದರ ಸ್ವಲ್ಪಾಂಶವನ್ನಾದರೂ ಸರ್ಕಾರ ತನ್ನ ಬೊಕ್ಕಸಕ್ಕೆ ಸೇರಿಸಿಕೊಳ್ಳಬಹುದಾಗಿತ್ತು.

ಇತ್ತೀಚಿಗೆ ಕೆಲವು ಆಯ್ದ ಕೈಗಾರಿಕಾ ಕುಟುಂಬಗಳ ವ್ಯವಹಾರಗಳ ಮೇಲೆ ತೆರಿಗೆ ಇಲಾಖೆಯವರು ರೈಡ್ ಮಾಡಿದಾಗ ಕೋಟಿಗಟ್ಟಲೆ ರೂಪಾಯಿ ಮೌಲ್ಯದ, ಆಸ್ತಿ, ಆದಾಯ, ಲಾಭ ಅಕ್ರಮವಾಗಿ ಸಂಗ್ರಹಿಸಿರುವುದು ಬೆಳಕಿಗೆ ಬಂದಿದೆ. ಆದರೆ ಪ್ರಚಾರಕ್ಕೆ ಮಾಡಿದ ಈ ರೈಡ್‌ಗಳಿಂದ ಸರ್ಕಾರದ ಬೊಕ್ಕಸಕ್ಕೆ ಎಷ್ಟು ತೆರಿಗೆ ಸಂದಾಯವಾಗಿದೆ ಎಂದು ಲೆಕ್ಕ ಸಿಗಲಿಲ್ಲ.

ಸಾಧಾರಣ ದರ್ಜೆಯ ಅಕ್ಕಿಯ ಬೆಲೆಯನ್ನು ಕ್ವಿಂಟಾಲಿಗೆ ರೂ.217 ರಿಂದ ರೂ. 331ಕ್ಕೆ ಏರಿಸಿದೆ; ಉತ್ತಮ ದರ್ಜೆಯ ಅಕ್ಕಿಯ ಬೆಲೆಯನ್ನು ರೂ. 229 ರಿಂದ ರೂ 243ಕ್ಕೆ ಏರಿಸಿದೆ.

## ಹೊಸ ನೀತಿಯ ಫಲ

ಜೀವನಾವಶ್ಯಕ ವಸ್ತುಗಳ ಬೆಲೆ ಏರಿಕೆಯಿಂದ, ಜನಸಾಮಾನ್ಯರ ಗ್ರಾಹಕ ಶಕ್ತಿಯು ಕ್ಷಯಿಸುತ್ತಿದ್ದು ಕೃಷಿ ಕೈಗಾರಿಕೆಗಳಿಗೆ ಆಂತರಿಕ ಮಾರ್ಕೆಟ್ಟೆ ಸಂಕುಚಿತವಾಗುವುದು ಪರಿಣಾಮವಾಗಿ, ಆರ್ಥಿಕ ಅಭಿವೃದ್ಧಿಗಾಗಿ ಶ್ರೀಮಂತ ವರ್ಗದ ಸುಖಭೋಗ ವಸ್ತುಗಳ ಆಂತರಿಕ ಮಾರುಕಟ್ಟೆಯನ್ನೂ, ರಫ್ತಿಗಾಗಿ ವಿದೇಶಿ ಮಾರುಕಟ್ಟೆಯನ್ನೂ ಅವಲಂಬಿಸಿ ಸ್ವಾವಲಂಬನೆಯನ್ನು ಕಳೆದುಕೊಳ್ಳಬೇಕಾಗುವುದು.

ರಫ್ತು ಆಧಾರಿತ ಆರ್ಥಿಕ ಅಭಿವೃದ್ಧಿಯಲ್ಲಿ, ಉದಾರ ಆಮದು ನೀತಿಯನ್ನು ಅನುಸರಿಸುತ್ತಿರುವುದರಿಂದ, ಯೋಜನೆಯ ಮೊದಲ ವರ್ಷದಲ್ಲಿಯೇ ವಿದೇಶಿ ವ್ಯಾಪಾರದಲ್ಲಿ ಭಾರೀ ಪ್ರಮಾಣದಲ್ಲಿ ಕೊರತೆ ಉಂಟಾಗಿದೆ. 1980-81ರಲ್ಲಿ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಿಂದ ಪಡೆದ ರೂ 5000 ಕೋಟಿ ಸಾಲದ ಮೊದಲ ಕಂತು ಬಡ್ಡಿ ಸಹಿತ 1986-87ರಲ್ಲಿ ಮರುಪಾವತಿ ಮಾಡಬೇಕಾಗಿದೆ. ಹಳೆಯ ವಿದೇಶಿ ಸಾಲಗಳ ಬಡ್ಡಿ ಸಹಿತ ಮರುಪಾವತಿ ಮಾಡುವ ಭಾರವೂ ಹೆಚ್ಚುತ್ತಿದೆ. ಯೋಜನೆಗೆ ಸಂಪನ್ಮೂಲ ಹಾಗೂ ಹೊಸ ತಂತ್ರಜ್ಞಾನ ಪಡೆಯಲು ಇನ್ನಷ್ಟು ವಿದೇಶಿ ಸಾಲವನ್ನು ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ಅಂತರರಾಷ್ಟ್ರೀಯ ಬ್ಯಾಂಕುಗಳಿಂದ ನಿರೀಕ್ಷಿಸಲಾಗಿದೆ.

ಈ ಮೂಲಗಳಿಂದ ವಿದೇಶಿ ಸಾಲ ಸಹಾಯಗಳನ್ನು ಪಡೆಯಲು ಪೂರ್ವ ಷರತ್ತುಗಳನ್ನು ಪಾಲಿಸಲೇಬೇಕಾಗುವುದು. ದೇಶದ ಆರ್ಥಿಕ ವ್ಯವಸ್ಥೆಯನ್ನು ಬಂಡವಾಳ ಜಗತ್ತಿಗೆ ತೆರೆದಿಡುವುದು, ಆಂತರಿಕವಾಗಿ ಸಾರ್ವಜನಿಕ ರಂಗಕ್ಕಿಂತ ಖಾಸಗೀ ರಂಗಕ್ಕೆ ಹೆಚ್ಚಿನ ಆದ್ಯತೆ ನೀಡುವುದು, ಜೀವನಾವಶ್ಯಕ ವಸ್ತುಗಳ ವಿತರಣೆಯ ಬೆಲೆ ಏರಿಸುವುದು, ಸಾರ್ವಜನಿಕ ರಂಗದ ಉತ್ಪಾದನೆಗಳ ಬೆಲೆ ಏರಿಸುವುದು, ಕೃಷಿ ಕೈಗಾರಿಕೆಗಳಿಗೆ ಮತ್ತು ಜನಸಾಮಾನ್ಯ

ಗ್ರಾಹಕರಿಗೆ ಸಹಾಯ ಧನ (subsidies) ಕಡಿಮೆಗೊಳಿಸುವುದು, ಅಗತ್ಯ ವಾದರೆ ರೂಪಾಯಿಯ ಅಂತರರಾಷ್ಟ್ರೀಯ ಬೆಲೆಯನ್ನು ಕಡಿಮೆ ಮಾಡುವುದು, ಅಪಮೌಲ್ಯ ಗೊಳಿಸುವುದು (devaluation) ರೂಪಾಯಿ ಅಪಮೌಲ್ಯದ ಅಪಾಯವನ್ನು ಸಿ.ಪಿ.ಐ. (ಎಂ) ಪಾಲಿಟ್ ಬ್ಯೂರೋ ಸದಸ್ಯ ಕಾ. ಬಿ. ಟಿ. ರಣದಿವೆ, ಲೋಕದಳ ಪ್ರಧಾನ ಕಾರ್ಯದರ್ಶಿ ಜಾರ್ಜ್ ಫರ್ನಾಂಡಿಸ್, ಪ್ರಸಿದ್ಧ ಅರ್ಥಶಾಸ್ತ್ರಜ್ಞ ಶ್ರೀಪ್ರಭಾತ್ ಪಟ್ನಾಯಕ್ ತಮ್ಮ ಇತ್ತೀಚಿನ ಹೇಳಿಕೆಗಳಲ್ಲಿ ಸ್ಪಷ್ಟಗೊಳಿಸಿದ್ದಾರೆ, ಜನರನ್ನು ಎಚ್ಚರಿಸಿದ್ದಾರೆ. (ಸಂಡೇ ಅಬ್ಸರ್‌ವರ್ 7-15. ಫೆ.86)

೭

# ಬಡತನ ನಿವಾರಣೆಯ ಮುಸುಕಿನಲ್ಲಿ ಬಂಡವಾಳ ಶಾಹಿಗಳಿಗೆ ಕುಮ್ಮಕ್ಕು

1986–87 ರ ಮುಂಗಡಪತ್ರ ಕಡಿಮೆ ಕರಭಾರದ್ದಾಗಿದೆ, ಬಡತನ ನಿವಾರಣೆಗೆ ಮತ್ತು ಸಾರ್ವಜನಿಕ ರಂಗಕ್ಕೆ ಹೆಚ್ಚಿನ ಆದ್ಯತೆ ಹಾಗೂ ಸಂಪನ್ಮೂಲ ಒದಗಿಸುವಲ್ಲಿ ಕಳೆದ ವರ್ಷದ ಮುಂಗಡ ಪತ್ರಕ್ಕಿಂತ ಉತ್ತಮವಾಗಿದೆ ಎಂದು ಸಂಬಂಧಪಟ್ಟ ವರ್ತುಲಗಳಿಂದ ಭಾರೀ ಪ್ರಚಾರ ನಡೆಯುತ್ತಿದೆ. ಯಾವುದೇ ವರ್ಷದ ಮುಂಗಡ ಪತ್ರವನ್ನು ಸ್ವತಂತ್ರವಾಗಿ ಪರಿಗಣಿಸದೆ, ಅದನ್ನು ಒಟ್ಟು ಆರ್ಥಿಕ ನೀತಿಯೊಂದಿಗೆ ಪರಿಶೀಲಿಸಬೇಕಾಗುವುದು.

ಈ ವರ್ಷದ ಮುಂಗಡ ಪತ್ರದಲ್ಲಿ ಕೇವಲ ರೂ 467 ಕೋಟಿ ಅಧಿಕ ತೆರಿಗೆ ವಿಧಿಸಲಾಗಿದ್ದು, ತೆರಿಗೆಯ ಭಾರ ಕಡಿಮೆ ಮಾಡಲಾಗಿದೆ ಎಂದು ಜನರನ್ನು ಸಮಾಧಾನ ಪಡಿಸಲಾಗುತ್ತಿದೆ. ಆದರೆ, ಹೊಸ ತೆರಿಗೆಯಲ್ಲಿ ರೂ. 21 ಕೋಟಿಯಷ್ಟೇ ಶ್ರೀಮಂತರ ಆದಾಯ ಮತ್ತು ಆಸ್ತಿಗಳ ಮೇಲಿನ ಪ್ರತ್ಯಕ್ಷ ತೆರಿಗೆಯಾಗಿದ್ದು, ಉಳಿದ ರೂ. 446 ಕೋಟಿಯಷ್ಟು ಜನಸಾಮಾನ್ಯರ ಜೀವನ ಮಟ್ಟ ಇನ್ನಷ್ಟು ಹದಗೆಡಿಸುವ ಅಪ್ರತ್ಯಕ್ಷ ತೆರಿಗೆಯಾಗಿದೆ. ಜೊತೆಗೆ ರೈಲ್ವೆ ಮುಂಗಡ ಪತ್ರದಲ್ಲಿ ಪ್ರಯಾಣಿಕ ದರವನ್ನು ರೂ. 76 ಕೋಟಿಯಷ್ಟು ಹೆಚ್ಚಿಸಿ, ಅದರ ಭಾರ ಹೆಚ್ಚಾಗಿ ಎರಡನೇ ವರ್ಗದ ಪ್ರಯಾಣಿಕರ ಮೇಲೆಯೇ ಹೇರಲಾಗಿದೆ. ಮುಂಗಡ ಪತ್ರದ ಪೂರ್ವದ ಒಂದೆರಡು ತಿಂಗಳ ಅವಧಿಯಲ್ಲಿ

ಕಲ್ಲಿದ್ದಲು, ಗೊಬ್ಬರ, ಆಹಾರ, ಧಾನ್ಯಗಳು, ಪೆಟ್ರೋಲಿಯಂ ಪದಾರ್ಥಗಳು ಇತ್ಯಾದಿ ಜೀವನಾವಶ್ಯಕ ವಸ್ತುಗಳ ಬೆಲೆಗಳನ್ನು ಆಡಳಿತ ನಿರ್ದೇಶನಗಳಿಂದ ಏರಿಸಿ ವರ್ಷಕ್ಕೆ ರೂ.2000 ಕೋಟಿಯಷ್ಟು ಅಪ್ರತ್ಯಕ್ಷ ತೆರಿಗೆಯ ಭಾರ ಜನ ಸಾಮಾನ್ಯರ ಮೇಲೆಯೇ ಹೊರಿಸಲಾಗಿದೆ. ಇಷ್ಟು ಸಾಲದೆ, ಈ ವರ್ಷ ರೂ 3650 ಕೋಟಿ ಕೊರತೆ ತೋರಿಸಲಾಗಿದೆ. ಅಂದರೆ ಇಷ್ಟು ಮೊತ್ತದ ಹಣ ಸೃಷ್ಟಿ ಮಾಡಿ ಆರ್ಥಿಕ ವ್ಯವಸ್ಥೆಯಲ್ಲಿ ಸರಕಾರದ ಆಡಳಿತ ಹಾಗೂ ಅಭಿವೃದ್ಧಿಯ ವೆಚ್ಚಕ್ಕಾಗಿ ಹರಿಯಬಿಡುವುದು. ಇದು ಕೂಡಾ ಜನಸಾಮಾನ್ಯರ ಮೇಲೆ ಹಣದುಬ್ಬರದ ಮೂಲಕ ಅಪ್ರತ್ಯಕ್ಷ ತೆರಿಗೆಯಾಗಿ ಪರಿಣಮಿಸುವುದರ ಅರ್ಥಾತ್ 1986–87 ರಲ್ಲಿ ಸರಕಾರದ ಹೆಚ್ಚುವರಿ ಸಂಪನ್ಮೂಲ ಸಂಗ್ರಹ ದಲ್ಲಿ ರೂ. 21 ಕೋಟಿಯಷ್ಟೇ ಭಾರವು ಶ್ರೀಮಂತರ ಮೇಲೆ ಬೀಳುವುದು ರೂ 6172 ಕೋಟಿಯಷ್ಟು ಪರೋಕ್ಷವಾಗಿ (ರೂ 446 ಕೋಟಿ ಅಪ್ರತ್ಯಕ್ಷ ತೆರಿಗೆ, ರೂ 76 ಕೋಟಿ ರೈಲ್ವೆ ದರ ಹೆಚ್ಚಳ, ರೂ 2000 ಕೋಟಿ ಅವಶ್ಯಕ ವಸ್ತುಗಳ ಬೆಲೆ ಏರಿಕೆ, ರೂ 3650 ಕೋಟಿ ಕೃತಕ ಹಣ ಸೃಷ್ಟಿ) ದೇಶದ ಜನ ಕೋಟಿಯ ಮೇಲೆ, ಮುಖ್ಯವಾಗಿ ದುಡಿಯುವ ಜನರ ಮೇಲೆ, ಬಡತನ ರೇಖೆ ಗಿಂತಲೂ ಕೆಳಮಟ್ಟದಲ್ಲಿರುವ ಶೇ. 50 ರಷ್ಟು ಜನಸಂಖ್ಯೆಯ ಮೇಲೆ, ಬೀಳು ವುದು ಸರಕಾರದ ಬೆಲೆ ಏರಿಕೆಯ ವಿರುದ್ಧ "ಭಾರತ್ ಬಂದ್" ಮುಂತಾದ ಪ್ರತಿಭಟನೆಗಳು ನಡೆಯದಿದ್ದರೆ, ರಾಜೀವ್ ಕಾಂಗ್ರೆಸ್ ಕಳೆದ ಒಂದು ವರ್ಷ ದಲ್ಲಿ ಅನೇಕ ಉಪಚುನಾವಣೆಗಳಲ್ಲಿ ಜನಪ್ರಿಯತೆಯನ್ನು ಕಳೆದುಕೊಳ್ಳದಿದ್ದರೆ, ಜನಸಾಮಾನ್ಯರ ಮೇಲೆ ಈ ವರ್ಷ ಇನ್ನೂ ಹೆಚ್ಚು ತೆರಿಗೆಭಾರ ಹೇರಲಾಗು ತ್ತಿತ್ತು !

ಕಳೆದ ವರ್ಷ ಶ್ರೀಮಂತರ ಆದಾಯ ಆಸ್ತಿಗಳ ಮೇಲೆ, ಅವರ ನಿಯಂತ್ರಣದ ಕೈಗಾರಿಕೋದ್ಯಮಗಳ ಲಾಭದ ಮೇಲೆ ಕೆಲವು ತೆರಿಗೆಗಳನ್ನು ರದ್ದು ಮಾಡಿದುದರಿಂದ ಮತ್ತು ಕೆಲವು ತೆರಿಗೆಗಳ ದರಗಳನ್ನು ಇಳಿಸಿದುದ ರಿಂದ, ವರ್ಷಾಂತ್ಯದಲ್ಲಿ ಒಟ್ಟು ತೆರಿಗೆ ಸಂಗ್ರಹದಲ್ಲಿ ಶೇ. 22 ರಷ್ಟು ಮತ್ತು

ಆದಾಯ ತೆರಿಗೆಯಲ್ಲಿ ಶೇ. 36 ರಷ್ಟು ಹೆಚ್ಚಾಗಿದೆ ಎಂದು ಅರ್ಥ ಮಂತ್ರಿಯ ಸಾಧನೆಯನ್ನು ಹಾಡಿ ಹೊಗಳಲಾಗುತ್ತಿದೆ. ಆ ಕಾರಣದಿಂದ ಈ ವರ್ಷವೂ ಆಸ್ತಿ ಆದಾಯ ತೆರಿಗೆಗಳ ಮೇಲೆ ಇನ್ನಷ್ಟು ರಿಯಾಯಿತಿಗಳನ್ನು ನೀಡಲಾಗಿದೆ. ಆದರೆ, ಸಂಗ್ರಹದ ಏರಿಕೆಯ ದರ ಎಷ್ಟು ಕಾಲಮುಂದುವರಿಯಬಹುದು ?

ಕಳೆದ ವರ್ಷದ ಹೆಚ್ಚುವರಿ ತೆರಿಗೆ ಸಂಗ್ರಹದಲ್ಲಿ ಕಪ್ಪು ಹಣ ಬಿಳಿಯಾದದ್ದೂ ಇದೆ. ಕಪ್ಪು ಹಣದ ಗಾತ್ರ ವರ್ಷಕ್ಕೆ ಕನಿಷ್ಟ 37000 ಕೋಟಿ ಮತ್ತು ಗರಿಷ್ಟ ರೂ. 46000 ಕೋಟಿ ಎಂದು ಅಂದಾಜು ಮಾಡಲಾಗಿದ್ದು, ಇದಕ್ಕೆ ಹೋಲಿಸಿದರೆ ತೆರಿಗೆ ಸಂಗ್ರಹದ ಸಾಧನೆ ತೀರಾ ಗೌಣ. ಬಿಳಿ ಹಣದ ಮೇಲಿನ ತೆರಿಗೆ ಬಾಕಿಯೇ ರೂ.600–700 ಕೋಟಿಯಷ್ಟಾಗಿದ್ದು, ಹತ್ತು ದೊಡ್ಡ ಗುತ್ತೇದಾರಿ ಕೈಗಾರಿಕಾ ಕುಟುಂಬಗಳ ತೆರಿಗೆ ಬಾಕಿಯೇ ರೂ. 60 ಕೋಟಿ ರೂ ಮೀರಿದೆ ಸುಪ್ರೀಂಕೋರ್ಟ್ ಮತ್ತು ಹೈ ಕೋರ್ಟುಗಳಲ್ಲಿ ತೆರಿಗೆಗಳಿಗೆ ಸಂಬಂಧಿಸಿದ ಒಟ್ಟು 32000 ಮೊಕದ್ದಮೆಗಳು ಇತ್ಯರ್ಥವಾಗದೆ ನೆನೆಗುದಿಗೆ ಬಿದ್ದಿವೆ. ಇವುಗಳಿಗೆ ಹೋಲಿಸಿದಾಗಲೂ ತೆರಿಗೆ ಸಂಗ್ರಹ ಸಾಧನೆಯು ಗೌಣವಾಗಿದೆ. ತೆರಿಗೆಗಳ್ಳರ ವಿರುದ್ಧ ಕೆಲವು ಕಠಿಣ ಕ್ರಮಕೈಗೊಳ್ಳುವ ಕುರಿತು ಈಗ ಸರ್ಕಾರದ ಉನ್ನತ ಮಟ್ಟದಲ್ಲಿ ಮರು ಪರಿಶೀಲನೆ ನಡೆಯುತ್ತಿದೆ. ಇನ್ನಷ್ಟು ಸಡಿಲು ನೀತಿಯನ್ನು ಅನುಸರಿಸಲಾಗುತ್ತಿದೆ.

ಈ ಮಧ್ಯೆ ಲಕ್ಷಾಂತರ ಶ್ರೀಮಂತ ಭೂಮಾಲಿಕರು ಆದಾಯ ತೆರಿಗೆಯಿಂದ ಹೊರಗುಳಿದಿರುವುದರಿಂದ ಶ್ರೀಮಂತ ಬಂಡವಾಳ ಶಾಹಿಗಳೂ ತಮ್ಮ ಆಸ್ತಿ ಆದಾಯಗಳ ಮೇಲಿನ ತೆರಿಗೆ ಭಾರ ಕಡಿಮೆಗೊಳಿಸಲು ಇನಷ್ಟು ಒತ್ತಾಯಿಸುತ್ತಿದ್ದಾರೆ.

1986–87ರಲ್ಲಿ ಕೇಂದ್ರದ ಯೋಜನಾ ವೆಚ್ಚವು ರೂ. 22300 ಕೋಟಿಯಾಗಿದ್ದು, ಮೊದಲ ವರ್ಷಕ್ಕಿಂತ (1985–87 ರೂ 18500 ಕೋಟಿ) ಶೇ 2015 ರಷ್ಟು ಹೆಚ್ಚಾಗಿದೆ ಮತ್ತು ಏಳನೇ ಯೋಜನೆಯ ವೆಚ್ಚದ ಶೇ. 40 ರಷ್ಟು ಸಂಪನ್ಮೂಲವನ್ನು ಮೊದಲ ಎರಡು ವರ್ಷಗಳಲ್ಲಿಯೇ ಒದಗಿಸಲಾಗಿದೆ ಎಂದು ಹೊಗಳಲಾಗುತ್ತಿದೆ. ಇದು ಕೇವಲ ಅಂಕೆ ಸಂಖ್ಯೆ

ಗಳ ಕಸರತ್ತು. ಹೇಗೆ ? 1. ಈ ವರ್ಷದ ಯೋಜನಾವೆಚ್ಚವು, 1984-85ರ ಬೆಲೆ ಮಟ್ಟದಲ್ಲಿ ಹಿಂದಿನ ವರ್ಷಕ್ಕೆ ಹೋಲಿಸಿದರೆ, ಕೇವಲ ಶೇ. 10 ರಷ್ಟು ಹೆಚ್ಚಾಗಬಹುದು. 2 ಹಿಂದಿನ ವರ್ಷದಲ್ಲಿ ಯೋಜನಾ ವೆಚ್ಚ ಬಹಳ ಕಡಿಮೆ ಮಟ್ಟದಲ್ಲಿದ್ದು ಸರಕಾರ ಸಾರ್ವಜನಿಕರ ಕಟು ಟೀಕೆಗೆ ಗುರಿಯಾಗಿತ್ತು. ಅದನ್ನು ಸ್ವಲ್ಪ ನಿವಾರಿಸಿಕೊಳ್ಳಲು ಈ ಹೊಸ ಮುಖವಾಡ. 3 ಸಾರ್ವಜನಿಕ ರಂಗದ ವಿಸ್ತರಣೆಯಾಗದೆ, ಖಾಸಗೀ ರಂಗ ಬೆಳೆಯಲಾರದೆಂದು ದೆಹಲಿಯ ಹೊಸ ಆಡಳಿತಗಾರರಿಗೆ ಈಗ ಸ್ವಲ್ಪ ಮನವರಿಕೆಯಾಗಿರಬೇಕು.

ಮುಖ್ಯವಾಗಿ, ಸಾಂಕೇತಿಕವಾಗಿ ದೊಡ್ಡ ಗಾತ್ರದ ಸಾರ್ವಜನಿಕ ರಂಗವು ಆರನೇ ಯೋಜನೆಯಲ್ಲಿ ಇನ್ನೂ ಅಪೂರ್ಣವಾಗಿ ಉಳಿದ ಅಭಿವೃದ್ಧಿ ಕಾರ್ಯಗಳಲ್ಲಿಯೇ ಕೇಂದ್ರೀಕೃತವಾಗಿದ್ದು, ಹೊಸ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಸಂಭವವಿಲ್ಲ. ಪರಿಣಾಮವಾಗಿ, ರೈಲ್ವೆ, ವಿದ್ಯುತ್, ನೀರಾವರಿ, ಉಕ್ಕು, ಕಲ್ಲಿದ್ದಲು, ತೈಲ, ಗೊಬ್ಬರ ಇತ್ಯಾದಿ ಮೂಲಭೂತ ಕೈಗಾರಿಕೆಗಳು ಸಂಪನ್ಮೂಲಗಳ ತೀವ್ರ ಕೊರತೆಯಿಂದಾಗಿ ಬಹಳ ಹಿಂದುಳಿಯುವುವು. ಯೋಜನೆಯಲ್ಲಿ ನಿರೀಕ್ಷಿಸಿದ ಆರ್ಥಿಕ ಅಭಿವೃದ್ಧಿ, ಕೃಷಿ-ಕೈಗಾರಿಕೋತ್ಪಾದನೆ ಮತ್ತು ಉದ್ಯೋಗಾವಕಾಶ ಸಾಧಿಸಲಸಾಧ್ಯ.

ಯೋಜನಾ ವೆಚ್ಚಕ್ಕಾಗಿ ಸಾರ್ವಜನಿಕ ರಂಗದ ಉತ್ಪಾದನೆಗಳ ಬೆಲೆ ಏರಿಸುವುದರಿಂದ, ಯೋಜನೆಯ ವೆಚ್ಚ ಇನ್ನಷ್ಟು ಹೆಚ್ಚುವುದು. ಅಪ್ರತ್ಯಕ್ಷ ತೆರಿಗೆಯು ಈಗಾಗಲೇ ಒಟ್ಟು ತೆರಿಗೆಯ ಶೇ. 85 ರಷ್ಟು ಗರಿಷ್ಠ ಮಟ್ಟಕ್ಕೇರಿದೆ. ಕೊರತೆ ಹಣ ಸೃಷ್ಟಿ 6ನೇ ಯೋಜನೆಯಲ್ಲಿ ಪೂರ್ವ ನಿಯೋಜಿತ ರೂ 5000 ಕೋಟಿಯಿಂದ ರೂ. 12000 ಕೋಟಿಗೇರಿದೆ. 7ನೇ ಯೋಜನೆಯಲ್ಲಿ ಕೊರತೆ ಹಣ ಸೃಷ್ಟಿ ರೂ 14000 ಕೋಟಿ ಎಂದು ಅಂದಾಜು ಮಾಡಲಾಗಿದ್ದು, ಮೊದಲ ಎರಡು ವರ್ಷಗಳಲ್ಲಿಯೇ ರೂ. 10,000 ಕೋಟಿಗೇರಲಿದ್ದು, ಅಂತ್ಯದಲ್ಲಿ ರೂ 25000 ಕೋಟಿ ಮೀರಬಹುದು ಸಾರ್ವಜನಿಕ ಸಾಲ. ಬಡ್ಡಿ ಸಹಿತ ಮರುಪಾವತಿ ಮಾಡುವ ವೆಚ್ಚದ ಭಾರ ಹೊಸ ಸಾಲದ ಶೇ, 40ಕ್ಕೇರಿದೆ. ವಿದೇಶಿ ಸಾಲ ಬಡ್ಡಿ, ಸಹಿತ ಮರುಪಾವತಿಯ ಭಾರ, ದೇಶದ ಒಟ್ಟು ರಫ್ತುಗಳಿಕೆಯ ಶೇ. 20 ಕ್ಕೇರಿದೆ. ದೇಶದ ರಫ್ತು ಸ್ಥಗಿತ

ಗೊಂಡು. ಆಮದು ಅಧಿಕಗೊಂಡು, ವಿದೇಶಿ ವ್ಯಾಪಾರದಲ್ಲಿ ಸದ್ಯ ರೂ. 10000 ಕೋಟಿಯಷ್ಟು ಕೊರತೆ ಕಾಣಿಸಿಕೊಂಡಿದೆ. ಸಾರ್ವಜನಿಕರಂಗಕ್ಕೆ ಹೆಚ್ಚು ಸಂಪನ್ಮೂಲ ಒದಗಿಸಲಾಗಿದೆ ಎಂಬ ಅಂಕೆ ಸಂಖ್ಯೆಗಳ ಕರಸರತ್ತು ಹೆಚ್ಚು ಕಾಲ ನಡೆಯಲಾರದು.

## ಬಡತನ ನಿವಾರಣೆ

1986-87ರಲ್ಲಿ ಬಡತನ ನಿವಾರಣೆಗೆ ಹಿಂದಿನ ವರ್ಷಕ್ಕಿಂತ ಶೇ. 65 ರಷ್ಟು ಹೆಚ್ಚು ಸಂಪನ್ಮೂಲ ಒದಗಿಸಲಾಗಿದೆ ಎಂದು ಹೇಳಿಕೊಳ್ಳಲಾಗಿದೆ. ಬಂಡವಾಳ ಶಾಹಿ ಆರ್ಥಿಕ ಅಭಿವೃದ್ಧಿಯಲ್ಲಿ ಬಡತನ ಹೆಚ್ಚುತ್ತಲೇ ಇರುವುದ ರಿಂದ ಅದರ ನಿವಾರಣೆ ಸಾಧ್ಯವೇ ಇಲ್ಲ ಏನಿದ್ದರೂ ಕೆಲವು ಪರಿಹಾರ ಕಾರ್ಯಕ್ರಮಗಳು ಅಷ್ಟೆ. ಉದಾ : ಹಿಂದಿನ ಎರಡು 20 ಅಂಶಗಳ ಮತ್ತು ಇಂದಿನ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಬಡತನ ಪರಿಹಾರಕ್ಕೆ ಹೆಚ್ಚು ಸಂಪನ್ಮೂಲ ಒದಗಿಸಬೇಕೆನ್ನುವುದು ಪ್ರಜಾಸತ್ತಾತ್ಮಕ ಬೇಡಿಕೆಯೇ ಆಗಿದೆ. ಕಳೆದ ವರ್ಷ ರಾಜೀವ್ ಸರಕಾರ ಹೆಚ್ಚು ಜನಪ್ರೀಯತೆ ಪಡೆದಿದ್ದು ಬಡತನ ಪರಿಹಾರಕ್ಕೆ ಕಡಿಮೆ ಸಂಪನ್ಮೂಲ ಒದಗಿಸಲಾಗಿತ್ತು. ಈ ವರ್ಷ ಜನಪ್ರಿಯತೆ ಇಳಿಮುಖವಾದುದರಿಂದ ಸ್ವಲ್ಪ ಹೆಚ್ಚು ಸಂಪನ್ಮೂಲ ಈ ಕ್ಷೇತ್ರಕ್ಕೆ ನೀಡಿರುವುದು ನಿಜ. ಆದರೆ, ಇದರಲ್ಲಿ ಬಡವಂಗೆ ಎಷ್ಟು ಸಲ್ಲುವುದು, ಮಧ್ಯ ವರ್ತಿಗಳಾದ ಲಾಭಬಡುಕರಿಗೆ ಎಷ್ಟು ಸಲ್ಲುವುದು ಎಂಬುದು ವಿವಾದಾತ್ಮಕ ವಾಗಿದೆ. ಮೀಸಲಾಗಿರಿಸಿದ ಎಷ್ಟು ಹಣ ಬಡವರಿಗೇ ಸೇರುವುದೆಂದು ಊಹಿ ಸಿದರೂ, ಪರಿಹಾರ ಬಡತನ ರೇಖೆಯ ಕುಟುಂಬಗಳಿಗೆ ತಲಾ ವರ್ಷಕ್ಕೆ ರೂ. 40 ದೊರಕಬಹುದು. ಆದರೆ ಕನಿಷ್ಟ ತಲಾವರ್ಷಕ್ಕೆ ರೂ. 1200-ತಿಂಗಳಿಗೆ ರೂ. 100-ಆದರೂ ಬಡಕುಟುಂಬಗಳಿಗೆ ತಲುಪಬೇಕಾದರೆ, ವರ್ಷಕ್ಕೆ ರೂ. 10000 ಕೋಟಿಯಷ್ಟಾದರೂ ಖರ್ಚು ಮಾಡಬೇಕಾಗುವುದು ಬದಲು, ಈ ಕಾರ್ಯಕ್ರಮಗಳಿಗೆ ಕೇವಲ ರೂ.1850ಕೋಟಿ ಸಂಪನ್ಮೂಲ ಒದಗಿಸಲಾಗಿದೆ.

ಅಪ್ರತ್ಯಕ್ಷ ತೆರಿಗೆ, ಕೊರತೆ ಹಣ ಸೃಷ್ಟಿ, ಜೀವನಾವಶ್ಯಕವಸ್ತುಗಳ ಬೆಲೆ ಏರಿಕೆಗಳಿಂದ 1986-87 ರಲ್ಲಿ 6172 ಕೋಟಿಯಷ್ಟು ಹೆಚ್ಚುವರಿ ಹಣ ಜನಸಾಮಾನ್ಯರಿಂದ ವಸೂಲಿ ಮಾಡಿ, ಅವರಿಗೆ ಕೇವಲ ರೂ. 6172 ಕೋಟಿ ಹೆಚ್ಚುವರಿ ಪರಿಹಾರ ನೀಡುವುದೆಂದರೆ, ಸರಕಾರದ ಪ್ರೀತಿ ಬಡವರ ಮೇಲಿದೆಯೇ, ಶ್ರೀಮಂತ ಜನರ ಮೇಲಿದೆಯೇ ಎಂದು ನಿರ್ಧರಿಸುವುದು ಕಷ್ಟವಾಗಲಾರದು. ಶೇ. 50 ರಷ್ಟು ಬಡಜನರಿಗೆ ಸರಕಾರದ ಒಟ್ಟು ವೆಚ್ಚದ ಶೇ. 2.3 ರಷ್ಟು ಮಾತ್ರ ಪರಿಹಾರ ನೀಡಲು ಉದ್ದೇಶಿಸಲಾಗಿದೆ. 30 ಮಿ. ಟನ್ ಆಹಾರ ಧಾನ್ಯಗಳು ಸರಕಾರದ ಗೋದಾಮುಗಳಲ್ಲಿ ಕೊಳೆಯುತ್ತಿದ್ದರೂ ಬಡ ಜನರು ಬೆಲೆ ಏರಿಕೆ, ಹಣದುಬ್ಬರದಿಂದ ತಮ್ಮ ಗ್ರಾಹಕಶಕ್ತಿ ಕಳೆದುಕೊಂಡು ಅವುಗಳನ್ನು ಖರೀದಿಸಲು ಅಶಕ್ತರಾಗಿದ್ದಾರೆ. ಸರಕಾರಿ ಸಂಪನ್ಮೂಲಗಳ ಕೊರತೆಯನ್ನು ನೀಗಿಸಲು ಆಹಾರ ಧಾನ್ಯಗಳ, ಗೊಬ್ಬರಗಳ ಮೇಲಿನ ಸಹಾಯ ಧನವನ್ನು ಕಡಿತಗೊಳಿಸಿದೆ.

ಬಡತನ ನಿವಾರಣೆಯ ಮುಸುಕಿನಲ್ಲಿ, ಸಾರ್ವಜನಿಕ ರಂಗಕ್ಕೆ ಹೆಚ್ಚು ಸಂಪನ್ಮೂಲದ ನೆಪದಲ್ಲಿ ಬಂಡವಾಳ ಶಾಹಿಗಳಿಗೇ ಹೆಚ್ಚು ಕುಮ್ಮಕ್ಕು, ಪ್ರೋತ್ಸಾಹ ಎಂದು ತಿಳಿಯಲು ಕಷ್ಟವಿಲ್ಲ. ಕಳೆದ ವರ್ಷಕ್ಕೂ ಈ ವರ್ಷಕ್ಕೂ ಸರಕಾರದ ಸಡಿಲು ಆರ್ಥಿಕ ನೀತಿಯಲ್ಲಿ ಬದಲಾವಣೆಯಿಲ್ಲ. ಆದರೆ ತಂತ್ರದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆ. ಕಳೆದುಕೊಳ್ಳುತ್ತಿರುವ ಜನಪ್ರಿಯತೆಯನ್ನು ಪುನಃ ಪಡೆಯುವ ಪ್ರಯತ್ನವಿದೆ ಅಷ್ಟೆ. ಶ್ರೀಮಂತ ವರ್ಗದ ಸುಖ ಭೋಗದ ಅಂತರಿಕ ಮಾರುಕಟ್ಟೆ ಮತ್ತು ರಫ್ತು ಪ್ರೋತ್ಸಾಹಕ್ಕೆ ಈ ವರ್ಷದ ಮುಂಗಡ ಪತ್ರದಲ್ಲಿಯೂ ಧಾರಾಳ ತೆರಿಗೆ ರಿಯಾಯಿತಿ ನೀಡಲಾಗಿದೆ ಮತ್ತು ಧನಸಹಾಯ ಒದಗಿಸಲಾಗಿದೆ. ಕೈಗಾರಿಕಾ ಕಂಪನಿಗಳ ಲಾಭದ ಮೇಲೆ "ಮೇಲ್ತೆರಿಗೆ"ರದ್ದು ಮಾಡಲಾಗಿದೆ, ಸರ್‌ಚಾರ್ಜ್‌ಅನ್ನು ಮುಂದಿನ ವರ್ಷದಿಂದ ರದ್ದು ಮಾಡುವುದಾಗಿ ಆಶ್ವಾಸನೆ ನೀಡಲಾಗಿದೆ. ಹೊಸ ಉದ್ಯಮಗಳಲ್ಲಿ ಹೂಡಿದ ಬಂಡವಾಳವನ್ನು 4 – 5 ವರ್ಷಗಳಲ್ಲಿಯೇ ಅತಿ ಲಾಭಗಳಿಕೆ

ಮೂಲಕ ಹಿಂದೆ ಪಡೆಯಲು ಅತ್ಯಾಕರ್ಷಕ ಸವಕಳಿ (depreciation) ದರವನ್ನು ನಿಗದಿಗೊಳಿಸಲಾಗಿದೆ. ಅಂದರೆ ಲಾಭಗಳಿಕೆಯ ಮೇಲೆ ಈ ಅವಧಿಯಲ್ಲಿ ತೆರಿಗೆ ಕೊಡಬೇಕಾಗಿಲ್ಲ. ಸಂಸತ್ತಿನ ಮುಂಗಡ ಪತ್ರದ ಅಧಿವೇಶನ ಮುಗಿಯುವ ಮುನ್ನ ರೂ. 80 ಕೋಟಿ ಹೆಚ್ಚುವರಿ ತೆರಿಗೆ ರಿಯಾಯಿತಿಯನ್ನು ಪುನಃ ನೀಡಿದೆ.

ವಿದೇಶಿ ಸಾಲ, ಸಹಾಯ ಪಡೆಯಲು ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಭಾರೀ ಪ್ರಮಾಣದ ಪ್ರೋತ್ಸಾಹ ಮುಂದುವರಿಸಲಾಗಿದೆ. ವಿದೇಶಿ ವ್ಯಾಪಾರದ ಅಗಾಧ ಪ್ರಮಾಣದ ಕೊರತೆಯನ್ನು ನೀಗಿಸಲು ವಿಶ್ವಬ್ಯಾಂಕ್ ಅಂತರ್‌ರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಇನ್ನಷ್ಟು ಸಾಲ ಪಡೆಯುವ ಪ್ರಯತ್ನದಲ್ಲಿ "ಸಾಲದ ಬಲೆಗೆ" ಬಿದ್ದು ಸ್ವಾವಲಂಬನೆಯನ್ನು ಕಳೆದುಕೊಳ್ಳುವ ಅಪಾಯ ಪರಿಸ್ಥಿತಿ ಉಂಟಾಗಿದೆ.

23-3-1986

ಕ್ರಿಯಾ ಪ್ರಕಾಶನ ಪ್ರೈ. ಲಿಮಿಟೆಡ್
ಶೋಭಾ ಲಾಡ್ಜ್ ಕಾಂಪ್ಲೆಕ್ಸ್, ಗಾಂಧಿನಗರ ಬೆಂಗಳೂರು-560009




